


# ಅಚಲ

ಸಂಪುಟ : 12
ಸಂಚಿಕೆ : 3

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ದ್ವೈಮಾಸಿಕ

ಜುಲೈ 1998
ಬೆಂಗಳೂರು

ಚಂದಾ ಮತ್ತು ಲೇಖನಗಳನ್ನು ಕಳುಹಿಸುವ ವಿಳಾಸ:
ಸಂಪಾದಕರು,
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
1ನೇ ಮುಖ್ಯರಸ್ತೆ, 9ನೇ ಅಡ್ಡರಸ್ತೆ,
ವಿಜಯನಗರ 2ನೇ ಹಂತ, ಬೆಂಗಳೂರು-560 040.




## ಒಳಪುಟಗಳಲ್ಲಿ....



ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ವಾರ್ಷಿಕ ಚಂದಾ | : | 30 ರೂ. |
| ಆಜೀವ ಚಂದಾ | : | 250 ರೂ. |
| (ಸಂಸ್ಥೆಗಳಿಗೆ) | : | 300 ರೂ. |

**ಸಂಪಾದಕ ಮಂಡಲಿ**
ಎನ್. ಗಾಯತ್ರಿ,
ನೇಮಿಚಂದ್ರ, ದೇವಿ
ಡಾ|| ಬಿ.ಎನ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್
ಎಚ್.ಎಸ್. ಗೀತಾ

**ಪ್ರಕಾಶಕರು**
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ,
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/- ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು.

ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು, ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕು

## ಮನವಿ

ಆತ್ಮೀಯರೇ,

ಕಳೆದ 12 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನವಿಟ್ಟು "ಅಚಲ" ಪತ್ರಿಕೆಯನ್ನು ನಿಮ್ಮದನ್ನಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಸದ್ಯದಲ್ಲೇ ನಮ್ಮೆಲ್ಲರ 'ಅಚಲ' ಮಾಸಪತ್ರಿಕೆಯಾಗಿ ಹೊರಬರಲಿದೆ ಎಂಬುದನ್ನು ತಮಗೆ ತಿಳಿಸಲು ತುಂಬ ಹರ್ಷಿಸುತ್ತೇವೆ. ವರ್ತಮಾನದ ಘಟನೆಗಳನ್ನು ಶೀಘ್ರವಾಗಿ, ಆಯಾಕಾಲದಲ್ಲೇ ದಾಖಲಿಸಲು ಇದರಿಂದ ನೆರವಾಗಲಿ ಎಂಬುದು ನಮ್ಮ ಈ ನಿರ್ಧಾರಕ್ಕೆ ಮುಖ್ಯ ಕಾರಣ.

'ಅಚಲ' ಮಾಸಪತ್ರಿಕೆಯಾಗಿ, ತನ್ನ ಎಂದಿನ ಗುಣಮಟ್ಟವನ್ನೂ ಉಳಿಸಿಕೊಳ್ಳಬೇಕಿರುವುದರಿಂದ, ಹೆಚ್ಚುತ್ತಿರುವ ಮುದ್ರಣ ವೆಚ್ಚವನ್ನು ತೂಗಿಸಲು ಪತ್ರಿಕೆಯ ಚಂದಾದರವನ್ನು ಕೆಳಕಂಡಂತೆ ಹೆಚ್ಚಿಸುವುದು ಅನಿವಾರ್ಯವಾಗಿದೆ. ತಾವು ಎಂದಿನಂತೆಯೇ ಇನ್ನು ಮುಂದೆಯೂ ಅಚಲದ ಚಂದಾದಾರರಾಗಿ, ಬೆಂಬಲಿಸಬೇಕೆಂದು ಕಳಕಳಿಯಿಂದ ಮನವಿ ಮಾಡುತ್ತಿದ್ದೇವೆ.

ಬದಲಾದ ಚಂದಾ ವಿವರಗಳು ಹೀಗಿವೆ :

| | | |
|---|---|---|
| ವಾರ್ಷಿಕ ಚಂದಾ | : | ರೂ. 40/- (ವ್ಯಕ್ತಿಗಳಿಗೆ) |
| | | ರೂ. 75/- (ಸಂಸ್ಥೆಗಳಿಗೆ) |
| ಆಜೀವ ಚಂದಾ | : | ರೂ. 300/- (ವ್ಯಕ್ತಿಗಳಿಗೆ) |
| | | ರೂ. 400/- (ಸಂಸ್ಥೆಗಳಿಗೆ) |

– ಸಂಪಾದಕ ಮಂಡಲಿ

ಕಾಲಿನಲ್ಲಿ ತುಳಿದು ವ್ಯಾನಿನೊಳಗೆ ಹಾಕಿದರು. ಸುಧಾಳಿಗೆ ಬೈದಂತೆಯೇ ಅಸಹ್ಯ ಪದಗಳನ್ನೂ ಪ್ರಯೋಗಿಸಿದರು. ಅವಳನ್ನು ಹಾಸನಕ್ಕೆ ಇತರ 11 ಜನರೊಡನೆ ಕರೆದೊಯ್ಯಲಾಯಿತು. ಅಲ್ಲಿನ ಸರ್ಕಾರಿ ಆಸ್ಪತ್ರೆಯಲ್ಲಿ ಎ.ಟಿ.ಎಸ್. ಇಂಜೆಕ್ಷನ್‌ನ್ನು ಎಲ್ಲರಿಗೂ ಕೊಟ್ಟು ಕಳುಹಿಸಿದರು. ರಾತ್ರಿ 10 ಗಂಟೆಗೆ ಚನ್ನರಾಯಪಟ್ಟಣ ಪೋಲೀಸ್ ಠಾಣೆಗೆ ಕರೆದುಕೊಂಡು ಬಂದಾಗ ಕಾನ್ಸ್‌ಟೇಬಲ್ ಎಲ್ಲರಿಗೂ ಕೈಗೆ ತೊಡಿಸುವ ಬೇಡಿಯಲ್ಲಿ ಹೊಡೆದರು. ರಾತ್ರಿ 11.30 ಗಂಟೆಗೆ ಮೂರು ಜನ ಮಹಿಳೆಯರೂ ಸೇರಿದಂತೆ 52 ಜನರನ್ನು ಮ್ಯಾಜಿಸ್ಟ್ರೇಟ್ ಬಳಿ ಕರೆತಂದರು. ಆದರೆ ಮ್ಯಾಜಿಸ್ಟ್ರೇಟ್ ಯಾರನ್ನೂ ಅವರ ನೋವಾಗಲೀ ಬೇರೆ ಯಾವುದರ ಬಗ್ಗೆ ವಿಚಾರಣೆ ನಡೆಸದೆಯೇ ಮಹಿಳೆಯರನ್ನು ಒಬ್ಬ ಮಹಿಳಾ ಪೋಲೀಸರ ಜೊತೆಯಲ್ಲಿ ರಾತ್ರಿ 1.30ಕ್ಕೆ ಹಾಸನ ಜೈಲಿಗೆ ಕಳುಹಿಸಿದರು. ಬೆಳಿಗ್ಗೆ 4 ಗಂಟೆಗೆ ಹಾಸನದ ಜೈಲು ತಲುಪಿದ ಆಶಾ ಮತ್ತಿಬ್ಬರು ಮಹಿಳೆಯರನ್ನು ಬೇರೆ ಖೈದಿಗಳೊಡನೆ ಇಡಲಾಯಿತು. ಭಾರೀ ಪೆಟ್ಟು ತಿಂದಿದ್ದ ಆಶಾಗೆ ನಿದ್ದೆಯೂ ಬಾರದೆ, ತಿಂಡಿ ತಿನ್ನಲೂ ಆಗಲಿಲ್ಲ. ಆಶಾಳೊಡನೆ ಬಂಧಿಸಿದ್ದ 45 ವರ್ಷದ ಬಾಗೂರಿನ ತಿಮ್ಮಮ್ಮ ಅವರಿಂದ ಬಚ್ಚಲು, ತೊಟ್ಟಿ, ಅಂಗಳ ಹಾಗೂ ನಡುಮನೆಯನ್ನೂ ಸ್ವಚ್ಛಮಾಡಿಸಿದರು. ''ಪೋಲೀಸರೇ ಕರ್‍ಕೊಂಡು ಬಂದಿದ್ದಾರೆ, ಅವರೇ ಕರ್‍ಕೊಂಡು ಹೋಗ್ತಾರೆ'' ಎನ್ನುತ್ತಿದ್ದ ಈ ಮಹಿಳೆ ಎಷ್ಟು ಮುಗ್ಧೆ ಎಂಬುದನ್ನು ಯಾರಾದರೂ ಊಹಿಸಬಹುದು! ಇಂತಹವರನ್ನೂ ಕೂಡ ಬಿಟ್ಟಿಲ್ಲ ಈ ಪೋಲೀಸರು. ಆಶಾ ಹೇಳುವಂತೆ ''ಪೋಲೀಸರೇ ಈಗ ನಿಜವಾದ ಅಪರಾಧಿಗಳಾಗಿದ್ದಾರೆ. ಜೈಲಿನಲ್ಲಿ ನಮ್ಮನ್ನು ಖೈದಿಗಳು ಬಹಳ ವಿಶ್ವಾಸದಿಂದ ನೋಡಿಕೊಂಡರು''.

12 ದಿನಗಳ ನಂತರ ಜಾಮೀನಿನ ಮೇಲೆ ಬಿಡುಗಡೆಯಾಗಿರುವ ಮತ್ತೊಬ್ಬ ಮಹಿಳೆ ಬಾಗೂರಿನ ಜಯಮ್ಮ (50 ವರ್ಷ). ಮನೆಯಲ್ಲಿ ಅವರು ರಾಗಿ ಸ್ವಚ್ಛ ಮಾಡುತ್ತಿದ್ದು, ಅವರ ಮಗ ಟೈಫಾಯ್ಡ್ ಕಾಯಿಲೆಯಿಂದ ನರಳುತ್ತಿದ್ದನು. ಮನೆಯೊಳಗೆ ನುಗ್ಗಿದ ಪೋಲೀಸ್ ಅವರಿಗೆ ಮನಸೋ ಇಚ್ಛೆ ಥಳಿಸಿ, ಅವರ ಮಗನಿಗೆ ಹೊಡೆದು, ಇವರನ್ನು ವ್ಯಾನಿಗೊಯ್ದರು. ಅನಂತರ ಬಂಧಿಸಿದರು ಕೂಡ. ಪೋಲೀಸರು ಕಲಾವಿದರು ಹಾಗೂ ಸಕ್ರಿಯ ಕಾರ್ಯಕರ್ತರನ್ನು ಬಂಧಿಸಲು ಅಲೆದಾಡಿ, ಮಂಜುನಾಥ್ ಎಂಬುವರ ಕೈಯನ್ನೂ ಮುರಿದಿದ್ದಾರೆ. ಅವರಿಗೆ ವಂಶವನ್ನೇ ನಾಶಮಾಡುವ ಬೆದರಿಕೆ ಕೂಡ ಹಾಕಿದ್ದಾರೆ. ಅನೇಕ ಯುವತಿಯರು ತಾವು ಏಟು ತಿಂದು ಹಲವರನ್ನು ಬಚಾಯಿಸಿದ ಉದಾಹರಣೆಗಳೂ ಇವೆ. ಇದು ನಮ್ಮ ಹಳ್ಳಿಗಳಲ್ಲಿನ ಹೆಣ್ಣುಮಕ್ಕಳ ಸದ್ಗುಣ. ಇಷ್ಟೆಲ್ಲಾ ಆಗುವ ಮೊದಲು ಪೋಲೀಸರು ಬಾಗೂರಿಗೆ ಹೋಗಿ ಸಿಕ್ಕ ಸಾರಾಯಿ ಅಂಗಡಿಗಳನ್ನೆಲ್ಲಾ ದೋಚಿ, ತಮಗೆ ಸಾಕೆನ್ನಿಸುವವರೆಗೆ ಕುಡಿದು, ಈ ಬರ್ಬರ ಪೈಶಾಚಿಕ ಕೃತ್ಯಗಳಲ್ಲಿ ತೊಡಗಿದರು. ಅವರಿಗೆ ಆಹುತಿಯಾದವರಲ್ಲಿ ಪತ್ರಿಕಾ ಮಾಧ್ಯಮದವರೂ ಕೂಡ ಸೇರಿದ್ದಾರೆ. ಇಷ್ಟೆಲ್ಲಾ ನಡೆಯುವಾಗ ಹಳ್ಳಿಗಳಲ್ಲಿ ಸ್ಮಶಾನ ಮೌನ ಆವರಿಸಿತ್ತು. ಆದರೂ ಯಾವ ಮಹಿಳೆಯೂ ಹೆದರದೆ ಪುನಃ ಚಳುವಳಿಗೆ ಕಾಲಿಟ್ಟಿರುವುದು ಅವರ ಧೈರ್ಯ ಮತ್ತು ದಿಟ್ಟತನವನ್ನು ಎತ್ತಿ ಹಿಡಿಯುತ್ತದೆ. ★

## ಕೆಂಪು ದೀಪದ ಕುಡಿಗಳು

ಬಾಲ್ಯದ ಸವಿಗನಸುಗಳೆಷ್ಟೋ ಅರ್ಥಕ್ಕೇ ಅಳಿದು,
ಮೊಲೆಹಾಲ ಗೀರುಗಳು ಗಲ್ಲದಲ್ಲೆ ಒಣಗಿ,
ನನ್ನ ಕೇಳಲು ದನಿ ಮುಚ್ಚಿದ ಬಾಗಿಲ ಹೊರಗೆ
ಸೋರಿ ಹೋದಾಗ - ನಾ ಕೇಳಲಿಲ್ಲ ನಿನ್ನ.

ನಿನ್ನ ತೊಡೆಯಲ್ಲಿ ಮಲಗಿ, ಕಿನ್ನರ ಲೋಕಕ್ಕೆಳೆದಾಗ
ಕನಕಾನಾಡಿನಿಂದ ಕತ್ತಲೆ ಮೂಲೆಗೆ ನನ್ನ ಎಸೆದು
ಭಾರವಾದ ಚಪ್ಪಲಿಗಳ ಸದ್ದಿಗೆ ಹೆಜ್ಜೆ ತೂರಿ
ನೀ ಸುಮ್ಮನೆ ನಡೆದಾಗ - ನಾ ಕೇಳಲಿಲ್ಲ ನಿನ್ನ
ತೊದಲು ಮಾತನು ತಿದ್ದಿ ಬೀಳುನಡೆಯ
ನೇರಗೊಳಿಸಿ,
ಮುದ್ದಿನಿಂದ ನನ್ನ ಹಿಗ್ಗಿಸುತ್ತಿದ್ದ ನನ್ನಮ್ಮ
ಪಿಸುಮಾತಿನ ಮಂಕುಬೆಳಕಿನ, ನಿಗೂಢತೆಯಲ್ಲಿ
ಹಸಿದ ರಾತ್ರಿಗೆ ಆಹಾರವಾದಾಗ ನಾ ಕೇಳಲಿಲ್ಲ ನಿನ್ನ.

ಆದರೆ–
ನಾಲ್ಕೂ ಬೀದಿಯ ಕ್ರೂರ ಕಣ್ಣೋಟಗಳ
ತಂದೆಗೇ ಹುಟ್ಟಿದ ಅಪ್ಪನ ಮಕ್ಕಳು
ಹಾದರದ ಪಿಂಡಕ್ಕೆ ಅಪ್ಪನೇಕೆಂದು ಹಂಗಿಸುವಾಗ
ಕೇಳುತ್ತಿದ್ದೇನೆ - ನನ್ನಪ್ಪನೆಲ್ಲಿ ಅಮ್ಮಾ ?

ಕೆಂಪುದೀಪದ ಕುಡಿಗಳು–ರಾತ್ರಿ ಅರಳುವ ಹೂಗಳು
ವಾಸನೆಯ ಒಡ್ಡೊಡೆದು ಕೊಳೆತ ಕೀಟಗಳು
ನಾವು ಲಂಪಟತೆಯ ಅಲಿಖಿತ ಭಾಷ್ಯಗಳು
ಆದರೂ ನಾವು ನಮ್ಮಪ್ಪನಿಗೇ ಹುಟ್ಟಿದವರು
ಅಲ್ಲವೇನಮ್ಮಾ?

- ಶಶಿಲೇಖಾ ಬಿ.

# ಗುಲಾಬಿ ನಗರದ ಕಪ್ಪು ಚುಕ್ಕೆಗಳು

-ಹೆಚ್.ಎನ್. ಗೀತಾ

ರಾಜಾಸ್ಥಾನ ಎಂದೊಡನೆ ನಮಗೆ ನೆನಪಾಗುತ್ತಿದ್ದುದು ಅಲ್ಲಿನ ಮರಳುಗಾಡು, ಮರಳುಗಾಡಿನ ಒಂಟೆಗಳು; ಅಲ್ಲಿನ ನೀರಿನ ಬವಣೆ, ಬೆಂಕಿಯಂಥ ತಾಪಮಾನ; ವಿಶ್ವವಿಖ್ಯಾತ 'ಪ್ಯಾಲೇಸ್ ಆನ್ ವೀಲ್ಸ್', ಉದಯಪುರ, ಜಯಪುರ. ಜಯಪುರ- ಭಾರತದ ''ಪಿಂಕ್ ಸಿಟಿ'' ಎನಿಸಿದ್ದ ನಗರ. ಈ ''ಪಿಂಕ್ ಸಿಟಿ'' ಈಗ ಪಿಂಕ್ ಸಿಟಿಯಾಗಿ ಉಳಿದಿಲ್ಲ. ಇದನ್ನು ಈಗ ಬ್ಲ್ಯಾಕ್ ಸಿಟಿ ಎಂದು ಕರೆಯುವುದೇ ಹೆಚ್ಚು ಸೂಕ್ತವಾದೀತೋ ಏನೋ. ಏಕೆಂದರೆ ನಾವು ಹೊಸ ಶತಮಾನ - ಹೊಸ ಸಹಸ್ರಮಾನದ ಹೊಸ್ತಿಲಲ್ಲಿ ನಿಂತಿರುವಾಗ, ಅಂಧವಿಶ್ವಾಸ, ಅನಕ್ಷರತೆ, ಬಡತನ, ನಿರುದ್ಯೋಗದ ಸಮಸ್ಯೆಗಳು ಕಾಲಿಗೆ ತೊಡರಿಕೊಂಡಿದ್ದೂ ಕೂಡ ಅಣ್ವಸ್ತ್ರ ಹೊಂದಿರುವ 'ಗಣ್ಯ' ರಾಷ್ಟ್ರಗಳ ಸಾಲನ್ನು ಸೇರುವಷ್ಟು ಮುಂದುವರಿದಿರುವಂಥ ಪರಿಸ್ಥಿತಿ ಇರುವಾಗಲೂ ಸಹ ಜಯಪುರ - ರಾಜಸ್ಥಾನದಿಂದ ಬೆಳಕಿಗೆ ಬರುತ್ತಿರುವ ಕತೆಗಳು ಮಹಿಳೆಯರ ಮೇಲಿನ ದೌರ್ಜನ್ಯದ್ದೇ. ಅವನ್ನು ಓದಿ-ಕೇಳಿ ಎಲ್ಲರ ಮುಖ ನಾಚಿಕೆ ಅವಮಾನಗಳಿಂದ ಕಪ್ಪಿಡುತ್ತದೆ. ರಾಜಾಸ್ಥಾನದಲ್ಲಿ ಮಹಿಳೆಯರ ಮೇಲೆ ಆಸಿಡ್ ಎರಚುವುದು, ಅಪಹರಣ, ಅತ್ಯಾಚಾರಗಳೆಲ್ಲಾ ಬೆಂಗಳೂರಿನಲ್ಲಿ 'ನೀರಿಲ್ಲ, ಕರೆಂಟಿಲ್ಲ'ದಷ್ಟೇ ಮಾಮೂಲಾಗಿಬಿಟ್ಟಿದೆ. ಈ ಮಾಮೂಲಿಗಳೊಳಗಾದ ರಿಚಾ ಮಾಮೂಲಿ ಹೆಣ್ಣಲ್ಲ. ಆಕೆ ಸಿಡಿದೆದ್ದಿದ್ದಾಳೆ. ಅವಳದು ಒಂದು ಮನ ಕಲಕುವ ಕತೆ.

ರಿಚಾ ಆಗ ಇಪ್ಪತ್ತರ ಯುವತಿ. ಎಂಟನೇ ತರಗತಿಯವರೆಗೆ ಮಾತ್ರ ಓದಿದ್ದು. ಅವಳು ಆಗ ಇದ್ದ ಮನೆಯೆದುರು ಒಂದು ಹಾಸ್ಟೆಲ್ ಇತ್ತು. ಅಲ್ಲಿನ ಹುಡುಗನೊಬ್ಬ ಅವಳಿಗೆ ಪರಿಚಿತನಾದ, ಸ್ನೇಹಿತನೂ ಆದ, ಮದುವೆಯ 'ಮಾತು' ಸಹ ಕೊಟ್ಟ. ಈ ಮಾತಿನ ಬಲೆಯಲ್ಲೇ ಅವಳ ದೇಹದ ದುರುಪಯೋಗವನ್ನೂ ಮಾಡಿಕೊಂಡ. ತಂದೆ-ತಾಯಿಗೆ, ಅಕ್ಕಪಕ್ಕದವರಿಗೆ ಹಾಗೂ ಸಮಾಜಕ್ಕೆ ಹೆದರಿದ ರಿಚಾ ಇದರ ಬಗ್ಗೆ ಮೌನವಾಗಿಯೇ ಉಳಿದಳು. ಆತ ಈ ಮೌನವನ್ನೂ ದುರುಪಯೋಗಪಡಿಸಿಕೊಂಡ. ಬಾಯಿ ಬಿಟ್ಟರೆ ಬಣ್ಣಗೇಡಾದೀತೆಂದು ಹೆದರಿಸಿ ಬೆದರಿಸಿ, ಅವಳು ತನ್ನ ಸ್ನೇಹಿತರಿಗೂ ದೊರಕುವಂತೆ ಮಾಡಿದ. ಹೀಗೇ ರಿಚಾ ಅವರ ಕೈಲಿ ಏಳು ವರ್ಷಗಳ ಕಾಲ ನಿರಂತರವಾಗಿ ನಲುಗಿದಳು. 1997ರಲ್ಲಿ ಜಯಪುರದ ಕುಖ್ಯಾತ ಲೈಂಗಿಕ ಹಗರಣಗಳು ಒಂದೊಂದಾಗಿ ಬೆಳಕಿಗೆ ಬರತೊಡಗಿದವು. ಆ ಸಮಯದಲ್ಲೇ ರಿಚಾಳ ಮೇಲೆ ನಡೆಯುತ್ತಿದ್ದ ಅವ್ಯಾಹತ ಅತ್ಯಾಚಾರವೂ ಪರಾಕಾಷ್ಠೆ ಮುಟ್ಟಿತು. 1997ರ ಸಪ್ಟೆಂಬರ್ 7ರಂದು ಆ ದುರುಳ ಸ್ನೇಹಿತ ರಿಚಾಳನ್ನು ಜೆ.ಸಿ. ಬೋಸ್ ಹಾಸ್ಟೆಲ್‌ಗೆ ಕರೆದೊಯ್ದ. ರಾಜಸ್ಥಾನದ ಪೋಲೀಸ್ ಪಡೆಗೆ ಆಯ್ಕೆಯಾದ ಸಮ್ಮಾನದಲ್ಲಿ ಅಲ್ಲಿನ ಕೋಣೆಯೊಂದರಲ್ಲಿ 'ಪಾರ್ಟಿ' ನಡೆಯುತ್ತಿತ್ತು. ''ಬ್ಲೂ ಫಿಲಂ ಹಾಗೂ ಕುಡಿತದ ಪಾರ್ಟಿ''. ಸರಿ, ಮುಂದೆ ಹೇಳಬೇಕಾದ್ದೇ ಇಲ್ಲ. ಕೋಣೆಯಲ್ಲಿದ್ದ 9 ಮಂದಿ ರಿಚಾಳನ್ನು ತಿಂದು ಮುಕ್ಕಿದರು. ಕೋಣೆಯ ಹೊರಗಿದ್ದ ಸುಮಾರು 10- 15 ಮಂದಿ ಈ ಕುಕೃತ್ಯಕ್ಕೆ ಅಲ್ಲಿಂದಲೇ ಕುಮ್ಮಕ್ಕು ನೀಡುತ್ತಿದ್ದರು. ಇತ್ತ ರಿಚಾಳ ಸಹನೆಯೂ ಕಟ್ಟೆಯೊಡೆಯಿತು. ತನ್ನ ಬಾಳನ್ನು ಚಿಂದಿ ಚಿಂದಿ ಮಾಡಿದ ಒಬ್ಬೊಬ್ಬರಿಗೂ ತಕ್ಕ ಶಾಸ್ತಿ ಮಾಡಬೇಕೆಂದು ತೀರ್ಮಾನಿಸಿದಳು. 15 ಮಂದಿ ಸತತವಾಗಿ ಏಳು ವರ್ಷ ನೀಡಿದ ಮಾನಸಿಕ ಹಿಂಸೆ, ಲೈಂಗಿಕ ಕಿರುಕುಳದೆದುರು ಎಲ್ಲಾ ಭಯವೂ ಕರಗಿಹೋಯಿತು. ಹಾಸ್ಟೆಲ್ ವಾಚ್‌ಮನ್‌ನ ನೆರವು ಪಡೆದು ಎರಡು ಕಿ.ಮೀ. ದೂರ ನಡೆದು ಹೋಗಿ ಪೋಲೀಸರಿಗೆ ದೂರಿತ್ತಳು. 'ಅಯ್ಯೋ, ಆರೋಪಿಗಳ ಪೈಕಿ ನಮ್ಮವರೇ ಇದ್ದಾರಲ್ಲ, ಪ್ರಭಾವಶಾಲಿ ಆಸಾಮಿಗಳೂ ಇದ್ದಾರಲ್ಲ, ರಾಜಕೀಯ ನಂಟುಳ್ಳವರೂ ಇದ್ದಾರಲ್ಲ' ಎಂದು ಪೋಲೀಸರು ಹಲುಬಿಕೊಂಡರು. ಸಾಕಷ್ಟು ಮೀನಮೇಷ ಎಣಿಸಿ, ಗತ್ಯಂತರವಿಲ್ಲದೆ ದೂರು ದಾಖಲಿಸಿಕೊಂಡರು. ಆದರೆ ವೈದ್ಯಕೀಯ ಪರೀಕ್ಷೆ ನಡೆದದ್ದು ಮಾತ್ರ ಮಹಿಳಾ ಸಂಘಟನೆಗಳ ಒತ್ತಾಯದ ನಂತರವೇ. ಆದರೆ ಆ ವೇಳೆಗಾಗಲೇ ಅತ್ಯಂತ ಮುಖ್ಯ ಸಾಕ್ಷ್ಯಾಧಾರವೊಂದು ನಾಶವಾಗಿಹೋಗಿತ್ತು. ನಾನಾ ಸಂಘ-ಸಂಸ್ಥೆಗಳ ಧರಣಿ, ಪ್ರತಿಭಟನೆ, ಒತ್ತಾಯಗಳಿಗೆ ಮಣಿದು ಪೋಲೀಸರು ಅಂತೂ ಇಂತೂ ಆರೋಪಿಗಳ ಪೈಕಿ 11 ಜನರನ್ನು ಬಂಧಿಸುವ 'ಧೈರ್ಯ' ಹಾಗೂ 'ಮನಸ್ಸು' ಮಾಡಿದರು. ಕೇಸು ಈಗ ಕೋರ್ಟಿನ ಮುಂದೆ ಇದೆ.

ಈ ಪ್ರಸಂಗ ಇಲ್ಲಿಗೇ ಮುಗಿಯಲಿಲ್ಲ. 'ಕೋರ್ಟಿಗೆ ಹೋದ ಪ್ರಸಂಗ ಎಂದಾದರೂ ಬೇಗ ಮುಗಿಯುವುದೇ?' ಎಂಬ ಪ್ರಶ್ನೆಯೂ ಬರಬಹುದು. ಅದಲ್ಲ, ಇದು ಬರೆಯ ಮೇಲೆ ಬರೆ ಹಾಕಿದ ಪ್ರಸಂಗ. 'ಸದ್ಯ, ದುಃಸ್ವಪ್ನ ಕೊನೆಗೂ ಕಳೆಯಿತಲ್ಲಾ' ಎಂದು ರಿಚಾ ಮಗ್ಗಲು ಬದಲಾಯಿಸಿದ್ದಳೋ ಏನೋ, ಆ ದುಃಸ್ವಪ್ನ ಅಷ್ಟರಲ್ಲೇ ಮರುಕಳಿಸಿತು.

1998ರ ಏಪ್ರಿಲ್ ತಿಂಗಳಲ್ಲಿ ರಿಚಾಳಿಗೆ ವಿಹಾಯ್ ಚಿಲ್ಡ್ರನ್ ರಿಸರ್ಚ್ ಸೊಸೈಟಿ ಎಂಬ ಎನ್.ಜಿ.ಓ. ಕಛೇರಿಯಲ್ಲಿ ನೌಕರಿ ಸಿಕ್ಕಿತು. ದಿನಾ ಸಾಯಂಕಾಲ 4.30ಕ್ಕೆ ವರ್ತನೆಯ ಆಟೋ ಒಂದರಲ್ಲಿ ಸಾಯಂಕಾಲ ಕಛೇರಿಯಿಂದ ಮನೆಗೆ ಹೋಗುವ ವಾಡಿಕೆ. ಆದರೆ ಮೇ 22ರಂದು ಸಾಯಂಕಾಲ ಕಛೇರಿಯಿಂದ ಹೊರಬಂದ ರಿಚಾಳನ್ನು ವಿಳಾಸ ಕೇಳುವ ನೆಪದಲ್ಲಿ ಬಂದ ಇಬ್ಬರು ಮುಸುಕುಧಾರಿಗಳು ಮಾರುತಿ ವ್ಯಾನಿನೊಳಕ್ಕೆ ದಬ್ಬಿಕೊಂಡು ಹೋದರು. ಅಲ್ಲಿ ಇನ್ನೂ ಇಬ್ಬರು ಮುಸುಕುಧಾರಿಗಳು ಸನ್ನದ್ಧರಾಗಿ ಕುಳಿತಿದ್ದರು. ಸರಿ,

ಮುಗಿಯಿತು ಎಂದುಕೊಂಡಿದ್ದ ಅತ್ಯಾಚಾರದ ಕಾಟ ಮತ್ತೆ 4 ಗಂಟೆಗಳ ಕಾಲ ನಡೆಯಿತು. ನಂತರ ಅವಳನ್ನು ಅಪಹರಿಸಿದ ಜಾಗದಲ್ಲೇ ಇಳಿಸಿದರು. ಜೊತೆಗೆ ಒಂದು ಎಚ್ಚರಿಕೆ ಬೇರೆ. ''ಆರೋಪಿಗಳ ಪಟ್ಟಿಯಿಂದ ಧರ್ಮೇಂದ್ರ ಮತ್ತು ಪ್ರಹ್ಲಾದ್ ಎಂಬುವರ ಹೆಸರು ತೆಗೆಯಬೇಕು. ಇಲ್ಲದಿದ್ದರೆ ಕುಟುಂಬದವರ ಪರಿಣಾಮ...''

ರಿಚಾ ಈ ಬಾರಿಯೂ ಕೂಡಲೇ ಪೋಲೀಸರಿಗೆ ದೂರನ್ನಿತ್ತಳು. ಈ ಹಿಂದೆಯೇ ತಮ್ಮ ಪಕ್ಷಪಾತ ಧೋರಣೆಗೆ, ಬೇಜವಾಬ್ದಾರಿ ನಡವಳಿಕೆಗೆ ಮೂದಲಿಕೆಗಳನ್ನು ತಿಂದಿದ್ದ ಪೋಲೀಸರು ಈ ಬಾರಿ ಕೂಡಲೇ ಕಾರ್ಯಪ್ರವೃತ್ತರಾದರು. ಅಪಹರಣಕಾರರರ ಪರವಾಗಿ ರಿಚಾಳನ್ನು ಸಂಪರ್ಕಿಸಿದ್ದಲೆನ್ನಲಾದ ಭೂವ್ಯವಹಾರದ ದಳ್ಳಾಳಿ ಸಂತೋಷ್ ಯಾದವ್‌ನನ್ನು ಬಂಧಿಸಿ ನಾಲ್ಕು ದಿನ ಎಡಬಿಡದೆ ವಿಚಾರಣೆ ನಡೆಸಿದರು. ಅತ್ತ ಮೇ 27ರಂದು ರಾಷ್ಟ್ರೀಯ ಮಹಿಳಾ ಆಯೋಗದ ಅಧ್ಯಕ್ಷೆಯಾಗಿದ್ದ ಶ್ರೀಮತಿ ಮೋಹಿನಿ ಗಿರಿಯವರು ರಿಚಾಳನ್ನು ಭೆಟ್ಟಿಯಾದಾಗ, ಅದೇಕೋ ಏನೋ ಅವಳ ಹೇಳಿಕೆ ತುಸು ಬದಲಾಯಿತು. ಸಂತೋಷ್ ಯಾದವ್ ಅವಳನ್ನು ಬ್ಲಾಕಮೇಲ್ ಮಾಡುತ್ತಿದ್ದನೆಂತಲೂ, ಮೇ 22ರಂದು ಸಂಜೆ ತನ್ನನ್ನು ಅವನ ಕಛೇರಿಗೆ ಕರೆದೊಯ್ದನೆಂದೂ, ಅಲ್ಲಿ ಈ ಪ್ರಕರಣ ನಡೆಯಿತೆಂದೂ ಹೇಳಿದಳು. ರಿಚಾ ಹೀಗೆ ಹೇಳಿದ್ದೇ ತಡ, ರಾಜ್ಯದ ಆಡಳಿತ ಸಂಸ್ಥೆಗೆ 'ರಿಚಾ ಸುಳ್ಳಿ, ನೀತಿಗೆಟ್ಟವಳು' ಎಂಬ ಪಟ್ಟಕಟ್ಟಿ, ರಿಚಾಳ ತಲೆಯ ಮೇಲೆಯೇ ಗೂಬೆ ಕೂರಿಸುವ ಧಾವಂತ.

ರಿಚಾ ಹೀಗೆ ಬೇರೆಯ ರೀತಿಯ ಹೇಳಿಕೆ ಕೊಡಲು ಕಾರಣವೇನಿರಬಹುದು?

ಏಳು ವರ್ಷಗಳು ಅನುಭವಿಸಿದ ಸತತ ಮಾನಸಿಕ ಹಾಗೂ ದೈಹಿಕ ಹಿಂಸೆ. ಈ ರೀತಿಯ ಹಿಂಸೆಗೆ ಬಲಿಯಾದವರು ಒಬ್ಬೊಬ್ಬರು ಒಂದೊಂದು ರೀತಿ ಪ್ರತಿಕ್ರಿಯಿಸುತ್ತಾರೆ. 25 ವರ್ಷಗಳ ಹಿಂದೆ ಅತ್ಯಾಚಾರಕ್ಕೊಳಗಾದ ನರ್ಸ್ ಅರುಣಾ ಶಾನಭಾಗ ತಾನು ಕೆಲಸ ಮಾಡುತ್ತಿದ್ದ ಆಸ್ಪತ್ರೆಯಲ್ಲೇ ಈಗ ಜೀವಚ್ಛವವಾಗಿ ಬದುಕಿದ್ದಾಳೆ. ಅವಳ ಈ ಸ್ಥಿತಿಗೆ ಕಾರಣನಾದ ಆರೋಪಿ ಅನುಭವಿಸಿದ್ದು ಕೇವಲ ಏಳು ವರ್ಷಗಳ ಶಿಕ್ಷೆ. ಕೇವಲ 9 ತಿಂಗಳುಗಳ ಅಂತರದಲ್ಲಿ ನಡೆದ ಅತ್ಯಚಾರ-ಅಂಥಿಂಥದ್ದಲ್ಲ, ಗುಂಪು ಅತ್ಯಾಚಾರ-ಮಾನಸಿಕ ಗೊಂದಲವಾಗದೆ ಇನ್ನೇನು ಎಂದು ಮಹಿಳಾ ಸಂಘಟನೆಗಳು ಹೇಳುತ್ತವೆ. ಪೋಲೀಸ್ ಇಲಾಖೆಯ ಪ್ರಕಾರ ಯಾರದೋ ಅತ್ಯಂತ ಪ್ರಭಾವಶಾಲಿ ವ್ಯಕ್ತಿಯ ಬೆದರಿಕೆಯೇ ಕಾರಣ. ಇದನ್ನೇ ಪುಷ್ಟೀಕರಿಸುವ ರಿಚಾಳ ತಂದೆ 'ಯಾರೋ ಜೀವಭಯವನ್ನು ಒಡ್ಡಿರಬಹುದು' ಅನ್ನುತ್ತಿದ್ದಾರೆ. ಅಭಿಪ್ರಾಯಗಳು, ಊಹಾಪೋಹಗಳು ಏನೇ ಇರಬಹುದು. ಆದರೆ ಸಿಟ್ಟು ಹಾಗೂ ವಿಷಾದದ ಸಂಗತಿಯೆಂದರೆ, ಆರೋಪಿಗಳೆಲ್ಲಾ ಮುಕ್ತವಾಗಿ ಅಡ್ಡಾಡುತ್ತಿರುವಾಗ ರಿಚಾ 'ಚಾರಿತ್ರ್ಯಹೀನೆ' ಆಗಿದ್ದಾಳೆ.

ರಾಜಸ್ಥಾನದ ಸ್ನೇಹದ ಕತೆಗಳು, ಪ್ರೇಮದ ಕತೆಗಳು, ತ್ಯಾಗದ ಕತೆಗಳು, ಸಾಹಸದ ಕತೆಗಳು - ಎಲ್ಲಾ ಎಷ್ಟು ಮನಸೂರೆಗೊಂಡಿದ್ದವು. ಈಗ ಅಲ್ಲಿ ಬರೀ ಕಾಮದ ಕತೆಗಳೇ, ದುಸ್ಸಾಹಸದ ಕತೆಗಳೇ ಕೇಳಬರುತ್ತವೆ. ಲಭಿಸಿರುವ ಅಂಕಿ-ಅಂಶಗಳ ಪ್ರಕಾರ ಅಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯ ವರ್ಷದಿಂದ ವರ್ಷಕ್ಕೆ ಜಾಸ್ತಿ ಆಗುತ್ತಿದೆಯೇ ಹೊರತು ಕಡಿಮೆಯಂತೂ ಆಗಿಲ್ಲ. ಉದಾಹರಣೆಗೆ, 1993ರಲ್ಲಿ ಅತ್ಯಾಚಾರದ 890 ಪ್ರಕರಣಗಳು ಬೆಳಕಿಗೆ ಬಂದರೆ, 1996ರಲ್ಲಿ ಅದು 1162 ಆಯಿತು. ಹಾಗೆಯೇ ವರದಕ್ಷಿಣೆ ಸಾವು 93ರಲ್ಲಿ 365 ಇದ್ದುದು, 96ರಲ್ಲಿ 415ಕ್ಕೆ ಏರಿತು. ಇನ್ನು ಅಪಹರಣ ಕೃತ್ಯಗಳು 93ರಲ್ಲಿ 2303 ಪ್ರಕರಣಗಳು ದಾಖಲಾಗಿದ್ದು, 96ರಲ್ಲಿ 2488ರಷ್ಟಾಯಿತು.

1998ರ ಮೇ ತಿಂಗಳಿನಲ್ಲೇ ಕನಾಲಿ ಜಿಲ್ಲೆಯಲ್ಲಿ 20 ವರ್ಷದ ಯುವತಿಯೊಬ್ಬಳು ಗುಂಪು ಅತ್ಯಾಚಾರಕ್ಕೊಳಗಾಗಿದ್ದಳು. ಆರೋಪಿಗಳ ಪೈಕಿ ಸ್ಥಳೀಯ ರಾಜಕಾರಣಿಯೂ ಒಬ್ಬ. ಈ ಪ್ರಕರಣದ ದೂರನ್ನು ಪೋಲೀಸರು ಸ್ವೀಕರಿಸಲೇ ಇಲ್ಲ. ಯುವತಿ ನೇರವಾಗಿ ಕೋರ್ಟಿಗೇ ಹೋಗಿದ್ದಾಳೆ. ಈ ಪ್ರಕರಣಕ್ಕೂ ಮುಂಚೆ ಕೋಟಾದಲ್ಲಿ ಒಬ್ಬ ಅಪ್ರಾಪ್ತವಯಸ್ಕ ಹುಡುಗಿಯ ಬಲಾತ್ಕಾರ ಮತ್ತು ಕೊಲೆ ನಡೆದಿದೆ.

ಜಯಪುರದಲ್ಲಿ ಮಹಿಳೆಯರ ಮೇಲೆ ಅತ್ಯಾಚಾರ, ದೌರ್ಜನ್ಯ ಹಾಗೂ ಮಹಿಳೆಯರ ಧರಣಿ, ಪ್ರತಿಭಟನಾ ಮೆರವಣಿಗೆ, ಬಂದ್‌ಗಳು ಸರ್ವೇಸಾಮಾನ್ಯವಾಗಿ ಬಿಟ್ಟಿವೆ. ಜನರ ಒತ್ತಡಕ್ಕೆ, ಒತ್ತಾಯಕ್ಕೆ ಮುಖ್ಯಮಂತ್ರಿಗಳು ಮಣಿದು, ಸರ್ಕಾರಕ್ಕೆ ಸಂಚಕಾರ ಬಂದೀತೆಂಬ ಭಯವೂ ಬಂದು ರಿಚಾಳ ಪ್ರಕರಣದ ತನಿಖೆಯನ್ನು ಸಿಬಿಐಗೆ ಒಪ್ಪಿಸಿದ್ದಾರೆ. 'ರಾಜ್ಯ ಮಹಿಳಾ ಆಯೋಗ ಸ್ಥಾಪಿಸುತ್ತೇನೆ, ಎಲ್ಲಾ ಪೋಲೀಸ್ ಮುಖ್ಯ ಕಛೇರಿಗಳಲ್ಲಿ ಮಹಿಳಾ ಸೆಲ್ ಸ್ಥಾಪಿಸುತ್ತೇವೆ' ಎಂದೆಲ್ಲಾ ಆಶ್ವಾಸನೆ ಕೊಟ್ಟಿದ್ದಾರೆ. ಆದರೆ ಬೇಲಿಗಳೇ ಎದ್ದು ಹೊಲ ಮೇಯ್ದಾಗ ಏನು ಮಾಡುವುದು?

ಭಾರತದ ಸುವರ್ಣ ಸ್ವಾತಂತ್ರ್ಯೋತ್ಸವ ವರ್ಷದ ಸಮಾರಂಭಗಳು ಸಮಾಪ್ತಿಯಾಗುತ್ತಿರುವಾಗ, ಭಾರತದ ರಾಜಾಸ್ಥಾನದಲ್ಲಿ ಏನೆಲ್ಲಾ ಕಾರಸ್ಥಾನಗಳು ನಡೆಯುತ್ತಿವೆ! ಹೆಣ್ಣುಮಕ್ಕಳೆಂದರೆ ಇಲ್ಲಿ ಎಷ್ಟು ತಾತ್ಸಾರ! ಹೆಣ್ಣುಮಕ್ಕಳೆಂದರೆ ಎಂಥ ದಿವ್ಯ ನಿರ್ಲಕ್ಷ್ಯ! ಜಯಪುರದ ಗುಲಾಬಿ ರಂಗಿನ ಹವೇಲಿಯ ಕುಸುರಿ ಕಲಾಕೃತಿಯ ಚೌಕಟ್ಟಿನ ಕಿಟಕಿಯ ಬಳಿ ನಿಂತು ಘೂಂಘಟ್ ಅನ್ನು ಅರ್ಧ ಸರಿಸಿ ಚೆಲುವೆಯೊಬ್ಬಳು ಮುಗುಳ್ನಗುವುದು ಕೇವಲ ಜಾಹೀರಾತು ಚಿತ್ರಗಳಲ್ಲಿ ಮಾತ್ರ. ವಾಸ್ತವದಲ್ಲಿ, ಹೆಣ್ಣು ಜೀವ ಇಲ್ಲಿ ಅಗ್ಗ - ಬಲು ಅಗ್ಗ.



# ದಿಟ್ಟ ಮಹಿಳೆಯರು

**ಆಂ**ಧ್ರ ಪ್ರದೇಶದ ಪೂರ್ವ ಗೋದಾವರಿ ಜಿಲ್ಲೆಯಲ್ಲಿ ಒಂದು ಹಳ್ಳಿ ಪೆದ್ದಮಲ್ಲಾಪುರಂ ಎಂಬುದು. ಈ ಹಳ್ಳಿಯೂ ಸೇರಿದಂತೆ ಇನ್ನೂ ಇಪ್ಪತ್ತು ಹಳ್ಳಿಗಳು ಶಂಕವರಂ ಮಂಡಲಕ್ಕೆ ಸೇರುತ್ತರೆ. ಅಲ್ಲಿಯ ಜನ ಬಹುತೇಕ ಗುಡ್ಡಗಾಡಿನವರು. ಅವರ ಪೈಕಿ ಮಹಿಳೆಯರು ಈಚಿನ ದಿನಗಳಲ್ಲಿ ಅನಿರೀಕ್ಷಿತವಾದ ಸೆಣೆಸಾಟದಲ್ಲಿ ತೊಡಗಿಸಿಕೊಳ್ಳ ಬೇಕಾಯಿತು.

ಅದು ಪೀಪಲ್ಸ್ ವಾರ್ ಗ್ರೂಪ್‌ನವರ ಪ್ರಭಾವ ಹೆಚ್ಚಾಗಿರುವ ಭಾಗ. ಅವರನ್ನು ಯಥಾಪ್ರಕಾರ ಪೋಲೀಸಿನವರು ಹಿಂಬಾಲಿಸುತ್ತಿರುತ್ತಾರೆ ಮತ್ತು ಹಿಡಿದುಹಾಕಲು ಕಾದಿರುತ್ತಾರೆ. ಫೆಬ್ರವರಿ 16ಂದು ತುಣಿ ಎಂಬಲ್ಲಿ ಘರ್ಷಣೆಗಳಾಗಿ ಪೀಪಲ್ಸ್ ವಾರ್ ಗ್ರೂಪಿನವರು ಒಂದು ಬಸ್ಸಿಗೆ ಬೆಂಕಿಯಿಟ್ಟರು ಹಾಗೂ ಗಿರಿಜನ ಸಹಕಾರ ಸಂಸ್ಥೆಯ ಕಚೇರಿಯನ್ನು ಧ್ವಂಸಮಾಡಿದರು. ಮಹಿಳೆಯರು ನೇರವಾಗಿ ಪೋಲೀಸರ ಬೆಂಬಲಿಗರೂ ಅಲ್ಲ, ಪಿ.ಡಬ್ಲ್ಯೂ.ಜಿ. ಬೆಂಬಲಿಗರೂ ಅಲ್ಲ. ಆದರೆ ಕಾಡುಮೇಡುಗ್ಗಳ ಉತ್ಪನ್ನಗಳನ್ನು ಗಿರಿಜನ ಸಹಕಾರ ಸಂಸ್ಥೆಗೆ ಮಾರುವುದು ಅವರ ಜೀವನಾಧಾರ. ಅವರ ಊರಿನಿಂದ 16 ಕಿಲೋಮೀಟರ್ ದೂರದ ತುಣಿಗೆ ಇದ್ದದ್ದೇ ಒಂದು ಬಸ್ಸು, ಅದು ಸುಟ್ಟುಹೋಗಿ ಬೇರೊಂದು ಬಸ್ಸಿಲ್ಲದಾಗ ಅವರ ಬವಣೆ ವಿಪರೀತವಾಯಿತು. ಜನರ ಹಿತವನ್ನು ಕಾಯುವುದಕ್ಕೆಂದು 'ಹಳ್ಳಿ ಸಮಿತಿ'ಗಳನ್ನು ಮಾಡಿಕೊಂಡಿರುವ ಪಿ.ಡಬ್ಲ್ಯು.ಜಿ. ಜನರಿಗೆ ಅನುಕೂಲ ಮಾಡಿಕೊಡುವುದು ಹೋಗಿ ಪ್ರತಿಕೂಲ ಉಂಟುಮಾಡಿದ್ದು ಮಹಿಳೆಯರಿಗೆ ಕೋಪ ತಂದಿತು.

ಜೊತೆಗೆ ಪೋಲೀಸರ ಉಪಟಳ ಬೇರೆ. ಪಿ.ಡಬ್ಲ್ಯು.ಜಿ. ಕಾರ್ಯಕರ್ತರನ್ನು ನೋಡಿದಿರಾ, ಅವರು ಎಲ್ಲಡಗಿದ್ದಾರೆ, ಗೊತ್ತಿಲ್ಲವೆಂದು ಸುಳ್ಳು ಬೊಗಳುತ್ತೀರಾ, ಎಂದು ಈ ಅಮಾಯಕ ಜನರಿಗೆ ವಿಚಿತ್ರ ತೊಂದರೆ ಮತ್ತು ಹಿಂಸೆ ನೀಡುವುದು ಅವರ ದಿನನಿತ್ಯದ ಕಾರ್ಯಕ್ರಮ. ಎರಡೂ ಕಡೆಗಳ ಒತ್ತಡ ತಡೆಯಲಾಗದೆ ಮಹಿಳೆಯರು ಕಡೆಗೊಮ್ಮೆ ಈ 'ಹಳ್ಳಿ ಸಮಿತಿ'ಗಳ ಸದಸ್ಯರಿಗೆ ಎಚ್ಚರ ನೀಡಿ ಅಲ್ಲಿಂದ ಕಾಲ್ತೆಗೆಯುವಂತೆ ಹೇಳಿದರು. ಪೋಲೀಸರೂ ಅಲ್ಲಿ ಬಂದು ವಿನಾಕಾರಣ ತರಲೆ ತೆಗೆಯಬಾರದೆಂದು ಎಚ್ಚರಿಸಿದರು.

ಕಡೆಗೊಮ್ಮೆ ಪೋಲೀಸರ ಸಹಾಯ ಹೇಗೋ ತಮಗೇನೂ ಬೇಕಿಲ್ಲವೆಂದು ತಿಳಿಸಿ ತಾವೇ ಇಬ್ಬಂದಿಗೆ ಪರಿಹಾರ ಕಂಡುಕೊಳ್ಳಲು ಪೆದ್ದಮಲ್ಲಾಪುರಂನ ಮಹಿಳೆಯರು ಮುಂದಾದರು. ಸಾರಾಯಿ ಸರಬರಾಜಿನ ವಿರುದ್ಧ ಹಳ್ಳಿಗಳಲ್ಲಿ ದೊಡ್ಡ ಪ್ರಮಾಣದ ಹೋರಾಟ ನಡೆಸಿದ್ದ ಈ ಮಹಿಳೆಯು ಕದ್ದು ಸಾರಾಯಿ ಮಾರುತ್ತಿದ್ದ ಮೂವರು ಯುವಕರನ್ನು ಹಿಡಿದು ಚೆನ್ನಾಗಿ ಥಳಿಸಿದರು. ಅದಕ್ಕೆ ನಾಯಕತ್ವ ನೀಡಿದ ಮಹಿಳೆ ತೋಂಟ ರಾಮಯಮ್ಮ ಬೇರೆಯವರಿಗೂ ಅದೇ ಶಾಸ್ತಿ ಮಾಡುವುದಾಗಿ ಬಹಿರಂಗವಾಗಿ ಘೋಷಿಸಿದಳು. ಇವರನ್ನು ಪೀಡಿಸುತ್ತಿದ್ದವರು ಕ್ರಮೇಣ ತಣ್ಣಗಾಗಿ ಇವರಿಗೆ ಗೌರವ ತೋರಿಸಲಾರಂಭಿಸಿದರು.

ಸುತ್ತಮುತ್ತಲ ಮಹಿಳೆಯರು ಈಗ ವಾರಕ್ಕೊಮ್ಮೆ ಪೆದ್ದ ಮಲ್ಲಾಪುರಂನಲ್ಲಿ ಸಭೆ ಸೇರುತ್ತಾರೆ. ಏನಿಲ್ಲವೆಂದರೂ ಐನೂರು ಮಂದಿ ಅಂತಹ ಸಭೆಗಳಲ್ಲಿ ಪಾಲ್ಗೊಳ್ಳುತ್ತಾರೆ. ತಮ್ಮ ಕಠಿಣ ಜೀವನದ ಪರಿಸ್ಥಿತಿಯ ಬಗ್ಗೆ ಚರ್ಚಿಸುತ್ತಾರೆ. ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಪಶುಪಾಲನಾ ಕೇಂದ್ರವೊಂದು ಅವರ ಊರಲ್ಲಿ ಸ್ಥಾಪನೆಗೊಳ್ಳಬೇಕೆಂದು ಒತ್ತಾಯಿಸಿ ಈಚೆಗೆ ಎರಡು ಸಾವಿರ ಮಹಿಳೆಯರು ಪೆದ್ದಮಲ್ಲಾಪುರಂನಲ್ಲಿ ಸೇರಿದ್ದರು. ಪೂರ್ವ ಗೋದಾವರಿ ಜಿಲ್ಲೆಯ ಆಡಳಿತ ಯಂತ್ರಕ್ಕೆ ಇದರಿಂದ ಸ್ವಲ್ಪ ಚುರುಕು ಮುಟ್ಟಿದೆ. ಬಸ್ಸನ್ನು ಮತ್ತೆ ಬಿಡುವುದಾಗಿ ಆಶ್ವಾಸನೆ ದೊರೆತಿದೆ ಮತ್ತು ಅದನ್ನು ಸುಡುವವರು ಯಾರೂ ಇರುವುದಿಲ್ಲವೆಂಬ ಭರವಸೆ ಮಹಿಳೆಯರಿಗಿದೆ. ಆಸುಪಾಸಿನ ಸುಮಾರು ಅರವತ್ತು ಸರ್ಕಾರಿ ನ್ಯಾಯಬೆಲೆ ಅಂಗಡಿಗಳ ಉಸ್ತುವಾರಿಯನ್ನು ಈ ಮಹಿಳೆಯರಿಗೆ ವಹಿಸುವ ತೀರ್ಮಾನವಾಗಿದ್ದು ಈಗ ಅದೂ ಕಾರ್ಯಗತವಾಗಿದೆ. ತೋಂಟ ರಾಮಯಮ್ಮ, ಬಾಲಾಜಿ ಗಂಗ, ಮುಂತಾದ ಮಹಿಳೆಯರ ನೇತೃತ್ವದಲ್ಲಿ ಇದೊಂದು ಹೊಸ ಸ್ವಾಗತಾರ್ಹ ಪ್ರಯೋಗ ಮುನ್ನಡೆಯುತ್ತಿದೆ.

(ದಿ ವೀಕ್ ಹಾಗೂ ಇತರ ಆಧಾರಗಳಿಂದ ಸಂಗ್ರಹ)



# ಸ್ವಾತಂತ್ರ್ಯ ಪ್ರೇಮಿ ಸುಬ್ಬಮ್ಮ

ಗಾಂಧಿಯವರು ಕ್ವಿಟ್ ಇಂಡಿಯಾ ಚಳುವಳಿಗೆ ವಿದ್ಯಾರ್ಥಿಗಳನ್ನು ಹುರಿದುಂಬಿಸಿ ಶಾಲೆ, ಕಾಲೇಜುಗಳನ್ನು ಬಿಟ್ಟು ಹೊರಬನ್ನಿ ಎಂದು ಕರೆಯಿತ್ತಾಗ, ಆ ಕರೆಗೆ ಓಗೊಟ್ಟು ಅಸಂಖ್ಯ ಸಂಖ್ಯೆಯಲ್ಲಿ ವಿದ್ಯಾರ್ಥಿ ಸಮೂಹ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿತು. ಆಗ ಈ ಯುವ ಜನತೆಯ ಬಿಸಿರಕ್ತದ ಚಟುವಟಿಕೆಗಳು ಬ್ರಿಟಿಷ್ ಸರ್ಕಾರವನ್ನು ಅಲ್ಲಾಡಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಇಂತಹ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಸಮಸಮವಾಗಿ ಸಂಖ್ಯೆಯಲ್ಲಿ, ಸ್ಫೂರ್ತಿಯಲ್ಲಿ ಹಾಗೂ ವೀರಾವೇಶದಲ್ಲಿ ವಿದ್ಯಾರ್ಥಿನಿಯರೂ ಹೋರಾಟದಲ್ಲಿ ಭಾಗವಹಿಸಿದ್ದನ್ನು ಚರಿತ್ರೆ ಮರೆಯಲಾಗದು. ಹೀಗೆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಿದವರಲ್ಲಿ ಚಿಕ್ಕಮಗಳೂರಿನ ಶ್ರೀಮತಿ ಸುಬ್ಬನವರು ಒಬ್ಬರು.

ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭ. ಆಗ ಚಿಕ್ಕಮಗಳೂರಿನಲ್ಲಿ ನಡೆದ ಸಭೆಯೊಂದರಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಂ.ಎನ್. ಜೋಯಿಸ್‌ರವರ ಸೋದರಿ ಬಾಲಸುಂದರಮ್ಮ ಸಭೆಯನ್ನುದ್ದೇಶಿಸಿ ಮಾತನಾಡುತ್ತಿದ್ದರು. ಸಭೆಯಲ್ಲಿ ನೆರೆದಿದ್ದವರಲ್ಲಿ ಹುಡುಗಿಯರ ಸಂಖ್ಯೆ ಕಡಿಮೆಯಿತ್ತು. ಹಾಗೂ ಅವರ ಭಾಗವಹಿಸುವಿಯೂ ಅಷ್ಟಕ್ಕಷ್ಟೇ. ಇದರಿಂದಾಗಿ ನೆರೆದಿದ್ದ ಸಭೆಯಲ್ಲಿ ಹುಡುಗಿಯರನ್ನು ಚುಚ್ಚುವಂತೆ ಬಾಲಸುಂದರಮ್ಮ ಮಾತನಾಡಿ ಸ್ವಾತಂತ್ರ್ಯ ಹೋರಾಟದಲ್ಲಿ ಹೆಣ್ಣುಮಕ್ಕಳ ಭಾಗವಹಿಸುವಿಕೆಯ ಅವಶ್ಯಕತೆ ಮತ್ತು ಜವಾಬ್ದಾರಿಯನ್ನು ಕುರಿತು ಮಾತನಾಡಿದರು. ತಮಾಷೆಗೆಂದು ಸ್ನೇಹಿತರ ಜೊತೆಗೆ ಸಭೆಗೆ ಹೋಗಿದ್ದ ಸುಬ್ಬಮ್ಮನವರಿಗೆ ಸುಂದರಮ್ಮನವರ ಭಾಷಣ ಕೇಳಿ ಅಳುಕಾಯಿತು. ತಮ್ಮಂತಹ ವಿದ್ಯಾಭ್ಯಾಸ ಪಡೆದವರು ಸಾಮಾಜಿಕವಾಗಿ ನಿಷ್ಕ್ರಿಯವಾಗಿರುವುದರ ಬಗ್ಗೆ ಆಕೆ ಬೇಸರಿಸಿಕೊಂಡರು. ಮನೆಯಲ್ಲಿ ಸೋದರರು ಆಗಲೇ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಯಾಗಿತ್ತು. ಸೋದರ ಶಂಕರನಂತೂ ಸ್ವಾತಂತ್ರ್ಯ ಹೋರಾಟದಲ್ಲಿಯೇ ಸಂಪೂರ್ಣ ಮುಳುಗಿದ್ದುದು ಸುಬ್ಬಮ್ಮನವರಿಗೆ ಕಣ್ತೆರಿಸಿ ತಾನೂ ಚಳುವಳಿಯಲ್ಲಿ ಭಾಗಿಯಾಗಬೇಕೆಂದುಕೊಂಡರು.

ಬೆಂಗಳೂರಿನಲ್ಲಿ ಹಾಸ್ಟೆಲ್‌ನಲ್ಲಿದ್ದುಕೊಂಡು ಇಂಟರ್ ಓದುತ್ತಿದ್ದ ಸುಬ್ಬಮ್ಮ ಕಾಲೇಜು ಮುಚ್ಚಿದ ನಂತರ ತಮ್ಮೂರಾದ ಚಿಕ್ಕಮಗಳೂರಿಗೆ ಹಿಂತಿರುಗಿದಾಗ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿದ್ದು ಹೀಗೆ. ಅವರಷ್ಟೇ ಉತ್ಸಾಹೀ ಯುವತಿಯರಾದ ವೈದೇಹಿ, ಸರಸ್ವತಿ, ಜಯಲಕ್ಷ್ಮೀಯವರು ಇವರೊಂದಿಗೆ ಸೇರಿ ಹೆಣ್ಣುಮಕ್ಕಳನ್ನು ಸಂಘಟಿಸುವ ಕಾರ್ಯದಲ್ಲಿ ತೊಡಗಿದರು. ಬೆಳಗಿನ ಪ್ರಭಾತಫೇರಿ ಮತ್ತು ಸಂಜೆಯ ಪ್ರಾರ್ಥನಾಸಭೆಗೆ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಹೆಣ್ಣುಮಕ್ಕಳು ಬರುತ್ತಿದ್ದರು. ದೇಶಭಕ್ತಿಗೀತೆಗಳನ್ನು ಹಾಡುತ್ತಿದ್ದರು. ಒಂದು ರೀತಿಯ ಹೋರಾಟದ ವಾತಾವರಣ ಎಲ್ಲೆಲ್ಲೂ ಉಂಟಾಗುವಂತೆ ಮಾಡುತ್ತಿದ್ದರು. ಒಟ್ಟಿನಲ್ಲಿ ಈ ನಾಯಕಿಯರ ನೇತೃತ್ವದಲ್ಲಿ ಒಂದು ಮಹಿಳಾ ಸೇನೆಯನ್ನೇ ನಿರ್ಮಿಸಿದರು.

ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಶ್ರೀಮತಿ ಸುಬ್ಬಮ್ಮನವರನ್ನು ಬೆಂಗಳೂರಿನ ಅವರ ಮನೆಯಲ್ಲಿ ಮಾತಿಗೆಳೆದಾಗ ಅವರಲ್ಲಿ ಹರೆಯದ ವಿದ್ಯಾರ್ಥಿನಿಯ ಹುರುಪನ್ನೇ ಕಂಡೆ. ಎಪ್ಪತ್ತೈದು ವಸಂತಗಳನ್ನು ಕಂಡ ಸುಬ್ಬಮ್ಮನವರಿಗೆ ತಾವು ಮಾಡಿದ್ದು ಮಹತ್ವದ್ದೆಂಬ ಹಮ್ಮು ಇಲ್ಲ. ಅಲ್ಲದೆ, ಇಂದಿನ ಯುವಜನತೆಯ ಬಗೆಗೂ ನಿರುತ್ಸಾಹವಿಲ್ಲದೆ ಹೆಮ್ಮೆಯಿಂದ ತಮ್ಮ ಬಾಲ್ಯದ ನೆನಪುಗಳನ್ನು ನನ್ನೊಂದಿಗೆ ಹಂಚಿಕೊಂಡರು.

ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಸುಬ್ಬಮ್ಮ ಮತ್ತು ಅವರ ಗೆಳತಿಯರು ಪೋಲೀಸರಿಗೆ ಒಂದು ದೊಡ್ಡ ತಲೆನೋವಾಗಿದ್ದರು. ಇವರೆಲ್ಲರ ಚಟುವಟಿಕೆಗಳಿಗೆ ವೈದೇಹಿಯ ಮನೆಯೇ ಕೇಂದ್ರವಾಗಿತ್ತು. ಈ ನಾಯಕಿಯರು ಮನೆ ಮನೆಗೆ ಹೋಗಿ ಹಿರಿಯರಲ್ಲಿ ಮಾತನಾಡಿ ಹೆಣ್ಣುಮಕ್ಕಳನ್ನು ಕಲೆಹಾಕಿ ಒಂದು ದೊಡ್ಡ ಮಹಿಳಾಸೇನೆಯನ್ನು ಕಟ್ಟಿದರು. ಬೆಳಗ್ಗೆ, ಸಂಜೆ ದೇಶಭಕ್ತಿಗೀತೆಗಳು ಮತ್ತು ಭಾಷಣಗಳನ್ನು ಮಾಡಿ ಜನರನ್ನು ಪ್ರೇರೇಪಿಸುತ್ತಿದ್ದರು. ಈ ನಾಯಕಿಯರ ಚಲನವಲನಗಳನ್ನು ನಿಗಾ ಇಡಲು ಬಂದ ಪೋಲೀಸರಿಗೆ ದಾರಿ ತಪ್ಪಿಸುತ್ತಿದ್ದರು. ಅಷ್ಟೇ ಅಲ್ಲ, ಆ ಪೋಲೀಸರ ಸೈಕಲ್‌ಗಳ ಚಕ್ರಗಳಲ್ಲಿ ಗಾಳಿ ತೆಗೆದು ಅವರಿಗೆ ಕಾಟ ಕೊಡುತ್ತಿದ್ದರು. ಒಮ್ಮೆ ಊರಿನ ಪುರುಷ ಸತ್ಯಾಗ್ರಹಿಗಳೆಲ್ಲ ಬಂಧನಕ್ಕೊಳಗಾದಾಗ ಈ ಮಹಿಳಾ ಸೇನೆ ತಾವು ಖಾಲಿಯನ್ನು ತುಂಬಲು ಮುಂದೆ ಬಂದಿತು. ಅಕ್ಟೋಬರ್ 2ರಂದು ಗಾಂಧಿ ಹುಟ್ಟಿದ ದಿನವನ್ನು ಆಚರಿಸಲು

ಮಹಿಳೆಯರು ಮೆರವಣಿಗೆ ತೆಗೆದರು. ಊರಿನಲ್ಲಿ ನಿಷೇಧಾಜ್ಞೆಯಿತ್ತು. ಮೆರವಣಿಗೆ ಕೂಡದೆಂದು ಡಿ.ಸಿ. ಆಜ್ಞೆ ಮಾಡಿದ್ದರು. ಉದ್ದೇಶಿಸಿದ ಕಾರ್ಯಕ್ರಮವನ್ನು ರದ್ದುಮಾಡಲು ಇಚ್ಛಿಸದೆ ಗಲ್ಲಿಗಳಲ್ಲಾದರೂ ಮೆರವಣಿಗೆ ತೆಗೆಯಬೇಕೆಂದು ಈ ಮಹಿಳಾ ಸೇನೆ ನಿರ್ಧರಿಸಿ ಗಾಂಧಿಯವರ ಫೋಟೋ ಹಿಡಿದು ಮೆರವಣಿಗೆಯಲ್ಲಿ ಹೊರಟರು. ಈ ಸುದ್ದಿ ತಿಳಿದ ಹಲವಾರು ಜನರು ಮುಖ್ಯ ಬೀದಿಗಳಲ್ಲಿ ನೆರೆದು ಈ ಮೆರವಣಿಗೆಯನ್ನು ಕೂಡಿದ್ದರಿಂದ ಮೀಸಲು ಪಡೆಯ ಪೋಲೀಸರು ತಕ್ಷಣ ಸ್ಥಳಕ್ಕೆ ಬಂದು ಫೈರಿಂಗ್‌ಗೆ ಆದೇಶ ನೀಡಿದರು. ಆಗ ಜನ ಚೆದುರಿದರೂ ಈ ನಾಲ್ವರು ಮಹಿಳೆಯರು ಸ್ಥಳ ಬಿಟ್ಟು ಕದಲಲಿಲ್ಲ. ಕೋವಿ ಹಿಡಿದು ಹೆದರಿಸಿದರೂ ದಿಟ್ಟೆದೆಯಿಂದ ನಿಂತ ಈ ಹುಡುಗಿಯರ ಧೈರ್ಯಕ್ಕೆ ಡಿ.ಸಿ.ಯೂ ತಲೆದೂಗಿದರು. ಮರುದಿನ ಬೆಳಗ್ಗೆ ಪ್ರಭಾತಪೇರಿಗೆ ಹೊರಟುನಿಂತ ಈ ನಾಲ್ವರು ಮಹಿಳೆಯರನ್ನು ಪೋಲೀಸರು ಬಂಧಿಸಿ ಸೆರೆಮನೆಗೊಯ್ದರು. ಜನ ಸಂಭ್ರಮದಿಂದ ಇವರನ್ನು ಬೀಳ್ಕೊಟ್ಟರು. ಇವರಿಗೂ ಯಾವ ಹೆದರಿಕೆಯಾಗಲಿಲ್ಲ.

ಜೈಲಿನಲ್ಲೂ ವಿದ್ಯಾರ್ಥಿಗಳ ಹರತಾಳ, ಧರಣಿ ಮುಗಿಯುತ್ತಿರಲಿಲ್ಲ. ಒಮ್ಮೆ ಜೈಲಿನಲ್ಲೂ ಲಾಠಿ ಚಾರ್ಜ್ ನಡೆಯಿತು. ತಮ್ಮ ಸಹಚರರಿಗೆ ಲಾಠಿ ಚಾರ್ಜ್ ಮಾಡಿದ್ದಕ್ಕೆ ಎಲ್ಲರೂ ಉಪವಾಸ ಮುಷ್ಕರ ಮಾಡಿದ್ದು, ಎಲ್ಲವನ್ನೂ ಸುಬ್ಬಮ್ಮ ಸಂಭ್ರಮದಿಂದ ನೆನಪಿಸಿಕೊಳ್ಳುತ್ತಾರೆ. ಗಾಂಧಿಯ ಆದರ್ಶ, ಚಳುವಳಿಯ ಆದರ್ಶ ಅವರ ಬದುಕಿನಲ್ಲೂ ನುಸುಳಿತು. ಖಾದಿ ಉಟ್ಟು, ಚಳುವಳಿಯಲ್ಲಿ ಕ್ರಿಯಾಶೀಲವಾಗಿ ದುಡಿದು ಸಂಗಾತಿ ಶ್ರೀ ಎಸ್.ವಿ. ಮಂಜುನಾಥ್‌ರವರನ್ನು ವಿವಾಹವಾದರು. ಇವರ ಅಂತರ್ಜಾತಿ ವಿವಾಹಕ್ಕೆ ಸಮಾಜ ಮತ್ತು ಕುಟುಂಬಗಳು ವಿರೋಧಿಸಿದರೂ ಎದೆಗುಂದಲಿಲ್ಲ. ನಂತರವೂ ವಯಸ್ಕ ಶಿಕ್ಷಣ, ಗ್ರಾಮಗಳಿಗೆ ಭೇಟಿ, ಸಮಾಜ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು, ಸರ್ವೋದಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದರು. ಶಿಕ್ಷಣ ಇಲಾಖೆಯಲ್ಲಿ ಮುಖ್ಯೋಪಾಧ್ಯಾಯಿನಿಯಾಗಿ, ವಿಷಯ ತನಿಖಾಧಿಕಾರಿಯಾಗಿ ಸೇವೆ ಸಲ್ಲಿಸಿ ನಿವೃತ್ತಳಾದ ನಂತರ ಇಳಿವಯಸ್ಸಿನಲ್ಲಿಯೂ ಹೆಲ್ಪೇಜ್ ಮುಂತಾದ ಸಮಾಜಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇಂತಹ ಚಟುವಟಿಕೆಯ ಬುಗ್ಗೆಯಾದ ಸುಬ್ಬಮ್ಮನವರನ್ನು ಬೀಳ್ಕೊಡುವ ಮುನ್ನ ಕೊನೆಯದಾಗಿ, ಮಹಿಳಾ ಮೀಸಲಾತಿಯ ಮಸೂದೆಯ ಗೊಂದಲದ ಬಗ್ಗೆ ಅಭಿಪ್ರಾಯವನ್ನು ಕೇಳಿದೆ : ''ಮಸೂದೆ ಮಂಡಿಸದಂತೆ ತಡೆದಿರುವ ಈ ಗಂಡಸರ ರಾಜಕೀಯ ನೋಡಿದರೆ ಅಸಹ್ಯವಾಗುತ್ತೆ. ಆದರೆ ನನಗೆ ಖಡಿತ ದೃಢನಂಬಿಕೆಯಿದೆ. ಒಂದಲ್ಲ ಒಂದು ದಿನ ಈ ಮಸೂದೆಯು ಖಂಡಿತವಾಗಿ ಜಾರಿಯಾಗುತ್ತೆ. ಜಾರಿಯಾಗುವಂತೆ ಮಹಿಳೆಯರೇ ಹೋರಾಡುತ್ತಾರೆ. ಆಗ ದೇಶದ ರಾಜಕೀಯವೇ ಬದಲಾಗುತ್ತೆ'' ಎಂದರು.

★ ಎನ್. ಗಾಯತ್ರಿ

# ಪ್ರೀತಿಲತಾರ ಅಂತಿಮ ಸಂದೇಶ

*1930ರ ಏಪ್ರಿಲ್ 18ರಂದು 'ಮಾಸ್ತರ್-ದಾ' ಸೂರ್ಯಸೇನರ ನೇತೃತ್ವದಲ್ಲಿ ಯುವ ಕ್ರಾಂತಿಕಾರಿಗಳ ಗುಂಪೊಂದು ಪೂರ್ವ ಬಂಗಾಳದ ಚಿತ್ತಗಾಂಗ್‌ನಲ್ಲಿನ ಶಸ್ತ್ರಾಗಾರದ ಮೇಲೆ ದಾಳಿ ಮಾಡಿತು. ಇಂಡಿಯನ್ ರಿಪಬ್ಲಿಕನ್ ಸೇನೆಯ ಬ್ಯಾನರ್‌ನಡಿ 'ಸ್ವತಂತ್ರ ಚಿತ್ತಗಾಂಗ್'ನ ಸ್ಥಾಪನೆಯನ್ನು ಈ ಕ್ರಾಂತಿಕಾರಿಗಳ ಸಮೂಹ ಘೋಷಿಸಿತು. ಈ ಘಟನೆಯ ನಂತರ ಸರಣಿಯಲ್ಲಿ ಹಲವಾರು ಶಸ್ತ್ರದ ದಾಳಿಗಳು ನಡೆದವಾದರೂ ಆಳುವ ಬ್ರಿಟಿಷ್ ಸರ್ಕಾರ ಈ ದಾಳಿಗಳನ್ನು ಸಂಪೂರ್ಣವಾಗಿ ತುಳಿದು ಹಾಕಿತು. ಆದರೂ ಈ ಶಸ್ತ್ರಾಸ್ತ್ರದಾಳಿ ಸುಮಾರು ನಾಲ್ಕು ವರ್ಷಗಳ ಕಾಲ ಸತತವಾಗಿ ಮುಂದುವರೆಯಿತು.*

*1932ರ ಸಪ್ಟೆಂಬರ್ 24ರಂದು ಚಿತ್ತಗಾಂಗ್‌ನಲ್ಲಿ ಒಂದು ಯುರೋಪಿಯನ್ ಕ್ಲಬ್‌ನ ಮೇಲೆ ನಡೆದ ದಾಳಿ ಚಿತ್ತಗಾಂಗ್‌ನ ಕ್ರಾಂತಿಕಾರಿಗಳು ನಡೆಸಿದ ದಾಳಿಗಳಲ್ಲೇ ಬಹುಮುಖ್ಯವಾದುದು. ಆಗ ಈ ದಾಳಿಯಲ್ಲಿ ಧೈರ್ಯದಿಂದ ಮುನ್ನುಗ್ಗಿ ಪ್ರಾಣಾರ್ಪಣೆ ಮಾಡಿದ ಪ್ರೀತಿಲತಾ ಭಾರತದ ಕ್ರಾಂತಿಕಾರಿ ಚಳುವಳಿಯಲ್ಲೇ ಒಂದು ಮಹತ್ವದ ಹೆಸರು.*

*ಕಲ್ಕತ್ತೆಯ ಬೆಥೂನ್ ಕಾಲೇಜಿನಲ್ಲಿ ಪದವಿ ಪಡೆದ ಪ್ರೀತಿ ಲತಾ ಚಿತ್ತಗಾಂಗ್‌ನಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಳು. ಅವಳ ದಿಟ್ಟತನ ಮತ್ತು ದೇಶಪ್ರೇಮವನ್ನು ಮೆಚ್ಚಿದ ಮಾಸ್ಟರ್‌ದಾ 'ಯುರೋಪಿಯನ್ ಕ್ಲಬ್‌ನ ದಾಳಿ'ಯ ನೇತೃತ್ವವನ್ನು ಪ್ರೀತಿಲತಾಗೆ ವಹಿಸಿದರು. ಈ ಕಾರ್ಯಯಂತ್ರವನ್ನು ಯಶಸ್ವಿಯಾಗಿ ನೆರವೇರಿಸಿದ ಪ್ರೀತಿಲತಾ ಕೊನೆಗಳಿಗೆಯಲ್ಲಿ ಬ್ರಿಟಿಷರ ಬಂಧಿಯಾಗಬಹುದಾದ ಸಾಧ್ಯತೆ ಒದಗಿದಾಗ ಸೈಯನೈಡ್ ಸೇವಿಸಿ ಆತ್ಮಾಹುತಿ ಮಾಡಿಕೊಂಡಳು. ಆ ಕೊನೆಗಳಿಗೆಯಲ್ಲೂ ಅವಳು ಭಾರತದ ಮಹಿಳೆಯರಿಗ ತನ್ನ ಅಂತಿಮ ಸಂದೇಶ ಹೊತ್ತ ಚೀಟಿಯೊಂದನ್ನು ತನ್ನ ಉಡುಪಿನಲ್ಲಿಟ್ಟು ಕೊಂಡಿದ್ದಳು. ಈ ಅಂತಿಮ ಸಂದೇಶದ ಒಕ್ಕಣೆ ಇಲ್ಲಿದೆ.*

''ನಾನು ಇಂಡಿಯನ್ ರಿಪಬ್ಲಿಕ್ ಸೇನೆಯ ಚಿತ್ತಗಾಂಗ್ ಶಾಖೆಯ ಸದಸ್ಯೆ. ಬ್ರಿಟಿಷರ ಸಾಮ್ರಾಜ್ಯಶಾಹಿ ಆಳ್ವಿಕೆಯನ್ನು ಬುಡಸಮೇತ ಕಿತ್ತೆಸೆದು ನನ್ನ ತಾಯ್ನಾಡಿನಲ್ಲಿ ಪ್ರಜೆಗಳ ಸರ್ಕಾರವನ್ನು ಸ್ಥಾಪಿಸಲು ನಾನು ಇಚ್ಛೆ ಪಡುತ್ತೇನೆ. 'ಚಿತ್ತಗಾಂಗ್'ನ ಹೆಸರೇ ದೇಶಪ್ರೇಮಿ ಭಾರತೀಯ ಯುವ ಸಮುದಾಯವನ್ನು ಪ್ರಜ್ಞೆಯ ವಿಸ್ತಾರಕ್ಕೆ ಕರೆದೊಯ್ಯುವ ಸ್ಫೂರ್ತಿದಾಯಕ ಹೆಸರಾಗಿದೆ. 1930ರ ಸ್ಮರಣೀಯ ಘಟನೆ ಮತ್ತು ನಂತರದ ಜಲಾಲಬಾದ್, ಕಲಾರ್ಪೋಲೆ, ಫೇಣಿ, ಚಂದನ್‌ನಗರ, ಢಾಕಾ, ಕೊಮಿಲ್ಲಾ ಮತ್ತು ಧಲ್‌ಘಟ್ ಮುಂತಾದೆಡೆಗಳಲ್ಲಿ ನಡೆದ ದಾಳಿಗಳು ಭಾರತದ ಕ್ರಾಂತಿಕಾರಿಗಳಲ್ಲಿ ಹೊಸ ಹುಮ್ಮಸ್ಸು ಮತ್ತು ನವಚೈತನ್ಯವನ್ನು ತುಂಬಿತು. ಅಂತಹ ಘನತೆವೆತ್ತ ಸಂಸ್ಥೆಯ ಸದಸ್ಯಳೆಂದು ಹೇಳಿಕೊಳ್ಳಲು ನಾನು ಹೆಮ್ಮೆಪಡುತ್ತೇನೆ. ಇಂದು ಯುರೋಪಿಯನ್ ಕ್ಲಬ್‌ನ ಮೇಲೆ ನಡೆಸಿರುವ ದಾಳಿ ಸ್ವಾತಂತ್ರ್ಯ ಸಂಗ್ರಾಮದ ಭಾಗವಾಗಿ ನಡೆಸಿರುವಂತಹುದು. ಬ್ರಿಟಿಷರು ನಮ್ಮ ಸ್ವಾತಂತ್ರ್ಯವನ್ನು ಬಲವಂತವಾಗಿ ಕಸಿದುಕೊಂಡಿದ್ದಾರೆ. ಭಾರತ ದೇಶದ ಕೋಟ್ಯಾಂತರ ಸ್ತ್ರೀ-ಪುರುಷರ ರಕ್ತವನ್ನು ಹೀರಿ ಈಗ ದೇಶವನ್ನು ಬ್ರಿಟಿಷರು ನೋವಿನ ಕೂಪಕ್ಕೆ ತಳ್ಳಿದ್ದಾರೆ. ನಮ್ಮ ದೇಶದ ರಾಜಕೀಯ ಮತ್ತು ಆರ್ಥಿಕ ವಿನಾಶಕ್ಕೆ ಬ್ರಿಟೀಷರೇ ಸಂಪೂರ್ಣ ಜವಾಬ್ದಾರರು. ನಮ್ಮ ಜನರ ಮತ್ತು ಅವರ ಸ್ವಾತಂತ್ರ್ಯದ ನಡುವೆ ಬ್ರಿಟಿಷರು ಅಡ್ಡಗೋಡೆಯಾಗಿ ನಿಂತಿದ್ದಾರೆ. ಮನುಷ್ಯ ಜೀವವನ್ನು ಬಲಿತೆಗೆದುಕೊಳ್ಳುವುದು ಅನೈತಿಕ ಕೃತ್ಯವೆಂಬುದು ನಮಗೆ ತಿಳಿದಿದ್ದರೂ ನಮ್ಮನ್ನು ತುಳಿಯುತ್ತಿರುವ ಬ್ರಿಟಿಷರ ಮತ್ತು ಅವರ ಸರ್ಕಾರಿ ಅಧಿಕಾರಿಗಳನ್ನು ಸಂಪೂರ್ಣ ನಾಶಮಾಡಲು ಶಸ್ತ್ರಾಸ್ತ್ರಗಳನ್ನು ಕೈಗೆತ್ತಿಕೊಳ್ಳುವುದು ನಮಗೆ ಅನಿವಾರ್ಯವಾಗಿದೆ.

ಈ ಶಸ್ತ್ರಾಸ್ತ್ರ ಯುದ್ಧದಲ್ಲಿ ಸೇರಲು ನಮ್ಮ ಗೌರವಾನ್ವಿತ ಮಾಸ್ಟರ್-ದಾ ನನಗೆ ಕರೆಯಿತ್ತಾಗ ನಾನು ಅತ್ಯಂತ ಭಾಗ್ಯಶಾಲಿ ನಾನೆಂದುಕೊಂಡೆ; ನನ್ನ ಬಹುದಿನದ ಬಯಕೆ ಈಡೇರಿತೆಂದು ಭಾವಿಸಿದೆ. ಅದರಿಂದಾಗಿ ಈ ಕರೆಗೆ ಮನ್ನಿಸಿ ಸಂಪೂರ್ಣ ಜವಾಬ್ದಾರಿ ಹೊತ್ತಕೊಂಡೆ.

ನಾನು ಈಗ ನನ್ನ ದೇಶದ ಜನದ ಮುಂದೆ ನನ್ನ ಕೃತ್ಯವನ್ನು ಸಮರ್ಥಿಸಿಕೊಳ್ಳಬೇಕಾಗಿದೆ. ಒಬ್ಬ ಮಹಿಳೆ ಇಂತಹ ಹಿಂಸಾಕೃತ್ಯದಲ್ಲಿ ತೊಡಗುವುದಲ್ಲದೆ, ಅಂತಹ ಭಾವನೆಗಳನ್ನು ತನ್ನಲ್ಲಿ ಹೇಗೆ ಬೆಳೆಸಿಕೊಂಡಿದ್ದಾಳೆಂದು ನನ್ನ ದೇಶಬಾಂಧವರೇ ಹಲವು ಮಂದಿ ನನ್ನ ಬಗ್ಗೆ ಆಶ್ಚರ್ಯಪಟ್ಟಿರಬಹುದು. ಸ್ವಾತಂತ್ರ್ಯ ಹೋರಾಟದಲ್ಲಿನ ಸ್ತ್ರೀಪುರುಷರ ಭಾಗವಹಿಸುವಿಕೆಯ ರೀತಿಯ ಬಗೆಗಿನ ಬೇಧಭಾವದ ಬಗ್ಗೆ ನನಗೆ ಅಸಮಾಧಾನವಿದೆ. ನಮ್ಮ ಸೋದರರು ಶಸ್ತ್ರಾಸ್ತ್ರ ಯುದ್ಧದಲ್ಲಿ ತೊಡಗಬಹುದಾದರೆ ಮಹಿಳೆಯರೇಕೆ ಅಂತಹ ಅವಕಾಶದಿಂದ ವಂಚಿತರಾಗಬೇಕು? ರಜಪೂತ ಮಹಿಳೆಯರು ಯುದ್ಧಗಳಲ್ಲಿ ಭಾಗವಹಿಸಿ ತಮ್ಮ ಶೌರ್ಯ ಸಾಹಸಗಳನ್ನು ಮೆರೆಯುತ್ತಿದ್ದರು ಮತ್ತು ತಮ್ಮ ರಾಜ್ಯದ ಸ್ವಾತಂತ್ರ್ಯಕ್ಕಾಗಿ ಶತ್ರುಗಳ ಪ್ರಾಣ ತೆಗೆಯಲು ಹಿಂಜರಿಯುತ್ತಿರಲಿಲ್ಲ. ಹಾಗಿರುವಾಗ ಭಾರತವನ್ನು ವಿದೇಶೀಯರ ದಾಸ್ಯದಿಂದ ಮುಕ್ತಗೊಳಿಸಲು ನಾವು ಮಹಿಳೆಯರು ಈ ವೀರ ಯುದ್ಧದಿಂದ ಹಿಂದೆ ಸರಿಯುವುದು ಸರಿಯೇ? ಕಾಂಗ್ರೆಸ್‌ನವರು ನಡೆಸುತ್ತಿರುವ ಅಸಹಕಾರ ಚಳುವಳಿಯಲ್ಲಿ ನಮ್ಮ ಸೋದರಿಯರು ಅವರ ಸೋದರರೊಂದಿಗೆ ಸೇರುವುದು ಸರಿಯೆಂದಾದರೆ ನಾವೂ ನಮ್ಮ ಸೋದರರೊಂದಿಗೆ ಶಸ್ತ್ರಯುದ್ಧಗಳಲ್ಲಿ ಭಾಗಿಯಾದರೆ ತಪ್ಪೇನು?

ಇಂದು ಮಹಿಳೆಯರು ಮಹತ್ವದ ನಿರ್ಣಯವನ್ನು ತೆಗೆದುಕೊಳ್ಳಬೇಕಿದೆ. ಅವರು ತಮ್ಮ ಸೋದರರೊಂದಿಗೆ ಜೊತೆ ಜೊತೆಯಾಗಿ ಎಷ್ಟೇ ಕಷ್ಟಸಾಧ್ಯವಾದ ಕಾರ್ಯಗಳಿದ್ದರೂ ತಮ್ಮ ತಾಯ್ನಾಡಿನ ಬಿಡುಗಡೆಗಾಗಿ ಹೋರಾಡುತ್ತಾರೆ. ಈ ವಿಷಯವನ್ನು ಪ್ರಮಾಣೀಕರಿಸಿ ತೋರಿಸಲೆಂದೇ ನಾನು ಇಂದಿನ ಶಸ್ತ್ರದಾಳಿಯ ನೇತೃತ್ವವನ್ನು ವಹಿಸಿಕೊಂಡೆ.

ನನ್ನ ದೇಶದ ಸೋದರಿಯರು ಇಂತಹಯಾವ ಅಧೈರ್ಯ ಮತ್ತು ಬಲಹೀನತೆಯಿಂದ ನರಳುವುದಿಲ್ಲವೆಂದು ನಾನು ದೃಢವಾಗಿ ನಂಬಿದ್ದೇನೆ. ಶಸ್ತ್ರ ಹೊಂದಿದ ಭಾರತದ ಮಹಿಳೆಯರು ಎಲ್ಲ ಕಷ್ಟಕೋಟಲೆಗಳನ್ನು ದಾಟಿ ಕ್ರಾಂತಿಕಾರಿ ಹೋರಾಟಗಳಲ್ಲೂ ಭಾಗಿಯಾಗುತ್ತಾರೆ ಎಂಬ ಭರವಸೆ, ನಂಬಿಕೆಗಳನ್ನು ನನ್ನ ಹೃದಯದಲ್ಲಿಟ್ಟುಕೊಂಡು ಈ ದಿಕ್ಕಿನಲ್ಲಿ ನಾನು ಆತ್ಮಾಹುತಿ ಮಾಡಿಕೊಳ್ಳುತ್ತೇನೆ.

**ಕೃಪೆ : Women's Equality**

# ಒಂದು ಪೀಳಿಗೆಯ ಧ್ವನಿ

ಕ್ಷಣವಲ್ಲದ ಕ್ಷಣಗಳು
(ಕವನ ಸಂಕಲನ)
ಲೇಖಕಿ : ಎಸ್. ಮಾಲತಿ
ನೆಲಮನೆ ಪ್ರಕಾಶನ
ಕೆ.ಜಿ. ಕೊಪ್ಪಲು,
ಮೈಸೂರು-೧೪.
ಬೆಲೆ ರೂ. ೨೫ ರೂ.ಗಳು.

ಸ್ವಚ್ಛಂದ ಬದುಕಿನಲ್ಲಿ ಹೆಣ್ಣೊಬ್ಬಳು ನಿಂತಾಗ ಏನಾಗುತ್ತದೆ ಎನ್ನುವುದಕ್ಕೆ ಎಸ್. ಮಾಲತಿಯವರ 'ಕ್ಷಣವಲ್ಲದ ಕ್ಷಣಗಳು' ಕವನ ಸಂಕಲನ ಉತ್ತರವಾಗುತ್ತದೆ. ಶೀರ್ಷಿಕೆಯಲ್ಲಿಯೇ ನಕಾರಾತ್ಮಕವಾದ ದೃಷ್ಟಿಕೋನವನ್ನು ಮಾಲತಿಯವರು ಮೂಡಿಸುತ್ತಾರೆ. ಅವರ ಆಸೆಯ, ನಿರೀಕ್ಷೆಯ, ನೋವಿನ, ನಿರಾಸೆಯ, ಭಯದ, ಹತಾಶೆಯ ಕ್ಷಣಗಳು 'ಕ್ಷಣವಲ್ಲದ'ವಾಗುತ್ತದೆ. ಮುನ್ನುಡಿಯಲ್ಲಿ ಮಾಲತಿಯವರು "...ನನ್ನ ಮದುವೆಯೊಂದು ಅವಘಡ,...... ನೋವಿನ ಜೊತೆಯಲ್ಲೇ ಒಂಟಿತನ, ವಿರಹ, ಪ್ರೀತಿಗಳ ಒಳತೋಟಿ......" ಈ ಎಲ್ಲವೂ ತಮ್ಮಿಂದ ಪದ್ಯ ಬರೆಸಿವೆ ಎನ್ನುತ್ತಾರೆ. ಇದು ತೀರಾ ವೈಯುಕ್ತಿಕ ಭಾವನೆಗಳು ಎಂದುಕೊಂಡರೂ, ಸ್ತ್ರೀನೆಲೆಯ ಹೊಸ ಚಿಂತನೆಗಳಿಗೆ ಇದು ದಾರಿಯಾಗುತ್ತದೆ ಎನ್ನುವುದರ ಕಡೆಗೂ ಗಮನಹರಿಸಬೇಕು.

ಗಂಡು ತನ್ನೆಲ್ಲ ಸ್ವಚ್ಛಂದತೆಗೆ ಹೆಮ್ಮೆಪಡುವುದಾದರೆ ಹೆಣ್ಣು ಯಾಕೆ ಕುಗ್ಗಿ, ಸೊರಗಿ, ಹತಾಶಳಾಗಬೇಕು ಎನ್ನುವ ಪ್ರಶ್ನೆ ಮಾಲತಿಯವರ ಕವನಗಳನ್ನು ಓದಿದ ನಂತರ ಮೊದಲು ಏಳುವ ಪ್ರಶ್ನೆ. ಸ್ವಚ್ಛಂದತೆಯೇ ಎಲ್ಲ ಸಮಸ್ಯೆಗೂ ಪರಿಹಾರವಲ್ಲ. ಆದರೆ ಅಯಾಚಿತವಾಗಿ, ಮನುಷ್ಯನ ಕೈಮೀರಿ ಘಾಟಿಸಿದ ಘಟನೆಗಳಿಗೆ ಹೆಣ್ಣು ಮಾತ್ರ ಹೆಗಲುಕೊಟ್ಟು ಉತ್ತರದಾಯಿತ್ವದ ಸಾಕಾರಮೂರ್ತಿಯಾಗಿ ಕ್ರಿಸ್ತ ಶಿಲುಬೆ ಹೊತ್ತಂತೆ, ಕೀಳರಿಮೆಗಳ ಹೊತ್ತು ನಲಗಬೇಕೇಕೆ ಎನ್ನುವುದು ಪ್ರಶ್ನೆ.

ಇಲ್ಲಿ ಕವಯಿತ್ರಿಯ ಇಂತಹ ಒಳತೋಟಿಗಳು ಇಂಥ ಶಿಲುಬೆ ಹೊರುವ ಕ್ರಿಯೆಯಾಗಿದೆಯಾದರೂ, ಕೆಲವು ಕವನಗಳು ನಿಜಕ್ಕೂ ಒಂದು ಪೀಳಿಗೆಯ ಧ್ವನಿಯಾಗಿದೆ ಎನ್ನುವುದು ಮಹತ್ವದ ವಿಷಯ.

"ಮೊಲೆಯ ಹಾಲಿನೊಂದಿಗೇ
ಉಣಿಸುವರು ಹೆಣ್ಣು ಮಗುವಿಗೆ.
ಮದುವೆಯ ಸಿಹಿಕನಸು..."'

ಎನ್ನುವ ಅವರ ಮಾತು, ಸಂಪ್ರದಾಯ ನಡವಳಿಕೆಗಳು ಹೆಣ್ಣನ್ನು 'ಫಲವಂತಿಕೆ'ಯ ನೆಲೆಗೇ ಸಜ್ಜುಗೊಳಿಸುವ ರೀತಿಯನ್ನು ವಿವರಿಸುತ್ತದೆ.

ಯೋಗ್ಯ ಗಂಡನ ಪಡೆದು ಎರಡು ಮಕ್ಕಳ ಹಡೆದು...
ಮನೆಯ ಕಲ್ಲು ಕಲ್ಲುಗಳಲ್ಲಿ ಎದೆಯ ಕತೆ ಹೂತಿಟ್ಟು

ಬದುಕುವ ರೀತಿಗೆ ಬೆನ್ನುಹಾಕುವ ಕವಯಿತ್ರಿ ಹಳೆಯದನ್ನು ದಾಟಿಯೂ ಹೊಸದಕ್ಕೆ ತೆರೆದುಕೊಳ್ಳದೆ ದ್ವಂದ್ವವಾಗುತ್ತಾರೆ.

ಕಟ್ಟಿದ ತಾಳಿ ಬಿಗಿಯಾಗಿ
ಉಸಿರು ಕಟ್ಟಿದಂತಾಗಿ
ಕಣ್ಣಂಚು ಹನಿಯಾಗಿ...
ಭಕ್ತಿ ಭಾವವೂ ಬೇಡ
ಕಾಮದಾಹವೂ ಬೇಡ
ಬಂಡೆದ್ದು ನೋಡಿ ಒಮ್ಮೆ...

ಎಂದು ಕರೆಕೊಡುತ್ತಾರೆ. 'ಕಾಮದಾಹವೂ ಬೇಡ' ಎನ್ನುವ ಮಾತು ಇದ್ದರೂ ಸ್ವತಃ ಕಾಮಕ್ಕಾಗಿ, ಪ್ರೀತಿಗಾಗಿ, ಸಂಗಾತಿಗಾಗಿ ತಹತಹಿಸುತ್ತಾರೆ. "ಪ್ರಿಯತಮರಿಲ್ಲದೆ ಕೊರೆ, ನನ್ನ ಏಕಾಂತದ ಹೊರೆ", "ಆವರಿಸಿದ ನಿದ್ದೆಯಲ್ಲಿ, ಕಾಡಿಸುವುದು ಸುಪ್ತಕಾಮ"... "ನಿದ್ದೆಯಲ್ಲಿ ಧಿಗ್ಗನೆದ್ದು ಕಾಡಿತ್ತು ಕಾಮ, ಬೇಡುತ್ತಿತ್ತು ಕಾಮ"... ನಾನೀಗ ಮದಿಸಿದ ಆನೆ, ಯಾವ ಖೆಡ್ಡಾದಲ್ಲಿ ಬೀಳಿಸುವಿರಿ ನನ್ನನೀಗ" ಇತ್ಯಾದಿ ಮಾತುಗಳಿಂದ ಕಾಮದ ಬಗೆಗಿನ ಪರಿತಾಪ, ಸ್ವಾನುಕಂಪ ವ್ಯಕ್ತವಾಗುತ್ತದೆ.

'ಮದುವೆ' ಅನೇಕ ಹೆಣ್ಣುಗಳ ಬಾಳಿಗೆ ಕ್ರೂರ, ದಬ್ಬಾಳಿಕೆಯ ನೆಲೆಯನ್ನೇ ತಂದುಕೊಟ್ಟಿರುವುದು, ಹೆಣ್ಣು ನಿರಂತರ ಶೋಷಣೆಗೆ ಒಳಗಾಗುತ್ತಿರುವುದು ಇಂದು ನಿನ್ನೆಯ ಸಮಸ್ಯೆಯಲ್ಲ. ಕವಯಿತ್ರಿಯೇ ಹೇಳುವಂತೆ,

ಅಸಮಾನ, ಸಾಮರಸ್ಯವಿರದ ದಾಂಪತ್ಯ ಅಸಂಖ್ಯಾತ ಹೆಣ್ಣುಮಕ್ಕಳ

ಹೊರಜಗತ್ತಿನ ಸ್ಪರ್ಧೆ, ಮತ್ಸರ
ಉರಿಯುಬ್ಬರಗಳನ್ನೆಲ್ಲಾ
ಒಳಕೋಣೆಗೆ ತಂದು
ಸಂಭೋಗದಲೆ ಇರಿದೆ...

"ಅವನು ಹೊರದಬ್ಬಿದ ಆ ರಾತ್ರಿ... ಒಂದೊಂದೇ ಹೆಜ್ಜೆ ನಡೆದು, ಅನಾಥದಾರಿಯಲಿ ಬವಳಿ ಬಿದ್ದು..." ಮದುವೆ ಬಂಧನ ಮುರಿದರೂ,

ಹಿಂಸೆಗೆ ಹಣ್ಣಾದರೂ
ತೊಟ್ಟು ಕಳಚಿ ಬೀಳಲಿಲ್ಲ
ಮನೆಯಿಂದ ರಾತ್ರಿಗಳಲಿ
ಸಾವನರಸಿ ಹೋಗಲಿಲ್ಲ!

ಎನ್ನುವ ಅವರ ಮಾತುಗಳು ಈ ಪೀಳಿಗೆಯ ಮಹಿಳೆಯರಿಗೆ

## ಪುಸ್ತಕ ಪರಿಚಯ

ಮಾರ್ಗದರ್ಶನ ಮಾಡುವಂತಹುದಾಗಿದೆ. ಕುಸಿಯದೇ ಕಳಚಿಕೊಳ್ಳುವ, ಹೊಸನೆಲೆ ದಕ್ಕಿಸಿಕೊಳ್ಳುವ ಗಟ್ಟಿತನ ಖಂಡಿತಾ ಈಗೊಂದು 'ಮಾನದಂಡ'ವಾಗಬೇಕಾಗಿದೆ.

ಮದುವೆ ಮುರಿದ ನಂತರ, ಹಲವು ಗಂಡುಗಳ ಒಡನಾಟ, ಕುಡಿತ, ಇವು ಇಲ್ಲಿನ ಕೆಲವು ಪದ್ಯಗಳಲ್ಲಿ ಕವಯಿತ್ರಿಯ ಒಳತೋಟಿಗಳಾಗಿವೆ. ತಮ್ಮೆಲ್ಲ ಈ ವಿದ್ಯಮಾನಗಳನ್ನು ಕವಯಿತ್ರಿ ಸಮರ್ಥಿಸಿಕೊಳ್ಳುವುದೂ ಇಲ್ಲ, ಪಾಪಪಜ್ಞೆ, ಮಾಡಬಾರದ ಕೆಲಸ ಇತ್ಯಾದಿ ರೂಢಿಗತ ಅನಿಸಿಕೆಗಳಿಗೆ ಪಕ್ಕಾಗುವುದೂ ಇಲ್ಲ. ಹೇಳಿಕೊಳ್ಳುವುದಕ್ಕೆ ನಾಚುವುದೂ ಇಲ್ಲ. ಹಳೆಯ ನೆಲೆ ತಪ್ಪಿದೆ, ಹೊಸನೆಲೆ ಸಿಕ್ಕಿಲ್ಲ. ಈ ಎರಡರ ನಡುವಿನ ಹುಡುಕಾಟ ಪ್ರಯೋಗಗಳು ಇಲ್ಲಿನ ಪ್ರಧಾನ ನೆಲೆಯಾಗಿದೆ.

*ಈ ಜಗದ ಗಂಡುಗಳೆಲ್ಲ*
*ತಮ್ಮೊಳಗೆ ತಾವೊಂದು ಭದ್ರಕೋಟೆ*
*ಕಲ್ಲಿನಲ್ಲಿ ಹೂವಿಲ್ಲ*
*ನೀರ ಒಸರಿಲ್ಲ*
*ಒಳಗೊಳಗೇ ಹಿಂಸೆಯ ತುಪಾಕಿ ಗುಂಡುಗಳು*
*ಅವರ ಬದುಕೊಂದು ಯುದ್ಧ ವಿರಾಮ !*

ಈ ರೀತಿ ಸಾರ್ವತ್ರೀಕರಿಸಿ ಗಂಡನ್ನಾಗಲೀ, ಹೆಣ್ಣನ್ನಾಗಲೀ ಅರ್ಥೈಸುತ್ತಾ ಹೇಳಿಕೆ ಕೊಡುವುದು ಸರಿಯಲ್ಲವಾದರೂ ನೊಂದ ಹೆಣ್ಣುಗಳಿಗೆ ಕಣ್ಣಿಗೆ ಗಂಡು ಕಾಣಿಸುವುದು ಈ ರೂಪದಲ್ಲೇ ಎನ್ನುವುದೂ ಸತ್ಯ!

'ಕ್ಷಣವಲ್ಲದ ಕ್ಷಣಗಳು' ಸಂಕಲನದ ಬಹುತೇಕ ಪದ್ಯಗಳು ವಾಚ್ಯವನ್ನು ಮೀರಿದ, ಅರ್ಥಪೂರ್ಣ ಕವನಗಳಾಗಿಲ್ಲ ಎಂದು ಹೇಳಬಹುದಾದರೂ, ಕೆಲವು ಸಾಲುಗಳಂತೂ ಅನುಭವದ ಬಿಸಿ ಬಿಸಿ ಮೂಸೆಯಿಂದ ಉದುರಿದ ಹಸಿಹಸಿ ಭಾವನೆಗಳೇ ಎನಿಸಿದರೂ ಕೆಲವು ಕವನಗಳು ಮತ್ತೆ ಓದಬೇಕೆನಿಸುವಷ್ಟು ದಟ್ಟ ಅನುಭವವನ್ನು ಕೊಡುತ್ತವೆ.

*ದಾಹ ದೇಹಕೆಲ್ಲ ಹರಡಿ*
*ಪ್ರೇಮ ಕಾಮ ರಾಡಿಯಾಗಿ*
*ಕಾಮದಲ್ಲಿ ಹಿಂಸೆ ಇಣುಕಿ*
*ಸುಳಿಗೆ ಸಿಕ್ಕ ಜೀವದಂತೆ*
*ತೇಕಿ ತೇಕಿ ಉಸಿರು ಹಿಡಿದು*
*ಹೊರಗೆ ಬರದ ಚಕ್ರವ್ಯೂಹ*
*ಆಕಾರ ಮರೆತ ದೇಹ !!*

ಇಂಥ ಹಲವಾರು ಸಾಲುಗಳು ಮಾಲತಿಯವರು ಪಕ್ವ ಕವಯಿತ್ರಿಯರ ಹಾದಿಗೆ ಹೋಗಬಹುದಾದ ಸಾಧ್ಯತೆಯನ್ನು ತೋರಿಕೊಡುತ್ತದೆ.

**-ಶಾಂತಾ ನಾಗರಾಜ್**

## ವಿಚಾರ

# ಪ್ರಗತಿ ಆದರೂ ಅಭಿವೃದ್ಧಿ ಇಲ್ಲ...

**ಕ**ಳೆದ ಅನೇಕ ದಶಕಗಳಲ್ಲಿ ಆರೋಗ್ಯ, ದುಡಿಮೆ ಮತ್ತು ಶಿಕ್ಷಣದಂಥ ಕ್ಷೇತ್ರಗಳಲ್ಲಿ ಮಹಿಳೆಯರು ಗಮನಾರ್ಹ ಸಾಧನೆಯನ್ನು ಮಾಡಿದ್ದಾರೆ. 1950ರ ದಶಕದಿಂದೀಚೆಗೆ ಮಹಿಳೆಯರ ಆಯುಷ್ಯ 49 ರಿಂದ 68ಕ್ಕೆ ಏರಿದೆ. 1960ರಿಂದೀಚೆಗೆ ದುಡಿಮೆ ರಂಗದಲ್ಲಿ ಪಾಲ್ಗೊಳ್ಳುವ ಸಂಖ್ಯೆ ಶೇಕಡ 33 ರಿಂದ 54ಕ್ಕೆ ಏರಿದೆ. ಈಗ, 1980ರಿಂದೀಚೆಗೆ ಪ್ರೌಢಶಾಲೆ ಪ್ರವೇಶಿಸುವ ಬಾಲಕ, ಬಾಲಕಿಯರ ಸಂಖ್ಯೆಯ ನಡುವಣ ಅಂತರ ಗಮನಾರ್ಹವಾಗಿ ಕಡಿಮೆಯಾಗಿದೆ. ಅಂದರೆ ಒಂದು ನೂರು ಬಾಲಕರು ಪ್ರೌಢಶಾಲೆ ಪ್ರವೇಶಿಸಿದರೆ 90 ಬಾಲಕಿಯರು ಪ್ರೌಢಶಾಲೆ ಪ್ರವೇಶಿಸುವರು. ಈ ಸಂಖ್ಯೆ ಮೊದಲು 80 ಆಗಿತ್ತು.

ಮಹಿಳೆಯರ ಜೀವನಮಟ್ಟ ಸುಧಾರಣೆ ಮತ್ತು ಸಮಾಜದ ಚಟುವಟಿಕೆಗಳಲ್ಲಿ ಮಹಿಳೆಯರು ಪೂರ್ಣ ಪ್ರಮಾಣದಲ್ಲಿ ಪಾಲ್ಗೊಳ್ಳುವಂಥ ಅವಕಾಶ ಕಲ್ಪಿಸುವುದರಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಅಭಿವೃದ್ಧಿ ಅವಲಂಬಿತವಾಗಿದೆ ಎಂಬ ಅರಿವು ಈ ಪ್ರಗತಿ ಹೆಜ್ಜೆಗೆ ಬಹುಮಟ್ಟಿಗೆ ಕಾರಣವೆನ್ನಬಹುದು. ಅಂತರ ರಾಷ್ಟ್ರೀಯ ಸಮಾವೇಶಗಳು ಮಹಿಳಾ ಪ್ರಗತಿ ಮತ್ತು ಸಮಾನತೆ ಪ್ರಯತ್ನಗಳಿಗೆ ಹೆಚ್ಚಿನ ಕೊಡುಗೆ ನೀಡಿವೆ ಎಂದರೆ ತಪ್ಪಾಗದು. 1994ರಲ್ಲಿ, ಕೈರೋದಲ್ಲಿ ನಡೆದ ಜನಸಂಖ್ಯೆ ಮತ್ತು ಅಭಿವೃದ್ಧಿ ಕುರಿತ ವಿಶ್ವಸಂಸ್ಥೆಯ ಅಂತರ ರಾಷ್ಟ್ರೀಯ ಸಮಾವೇಶ ಹಾಗೂ ಬೀಜಿಂಗ್‌ನಲ್ಲಿ 1995ರಲ್ಲಿ ನಡೆದ ವಿಶ್ವಸಂಸ್ಥೆಯ ನಾಲ್ಕನೇ ವಿಶ್ವ ಮಹಿಳಾ ಸಮಾವೇಶ ಇವೇ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು.

ಇಂಥ ಪ್ರಗತಿಯ ಹೆಜ್ಜೆ ಕಂಡುಬಂದರೂ, 'ಪಾಪ್ಯುಲೇಷನ್ ರೆಫೆರೆನ್ಸ್ ಬ್ಯೂರೋ' (ಪಿಆರ್‌ಬಿ) ಅಂಕಿ-ಅಂಶಗಳನ್ನು ಗಮನಿಸಿದಾಗ

ವಿಶ್ವದಾದ್ಯಂತ ಮಹಿಳೆಯರು ಇಂದಿಗೂ ಸಾಮಾಜಿಕ ಹಾಗೂ ಆರ್ಥಿಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ ಎಂಬುದು ತಿಳಿದುಬರುತ್ತದೆ. ಈ ಸಂಸ್ಥೆಯು ಈ ವರ್ಷದ ಮಾರ್ಚ್ 8ರಂದು ಈ ಅಂಕಿ ಅಂಶಗಳನ್ನು ಬಿಡುಗಡೆ ಮಾಡಿದೆ.

ಮಹಿಳೆಯರ ಆಯುಷ್ಯ ಹೆಚ್ಚಿದ್ದರೂ ಆರೋಗ್ಯ ಕ್ಷೇತ್ರದಲ್ಲಿ ಸವಾಲುಗಳನ್ನೇ ಎದುರಿಸಬೇಕಾಗಿದೆ. ವಿಶ್ವದಲ್ಲಿ ಪ್ರತಿ ವರ್ಷ ಗರ್ಭಧಾರಣೆ, ಹೆರಿಗೆ ಮತ್ತು ಗರ್ಭಪಾತಗಳ ಕಾರಣದಿಂದಲೇ ಸುಮಾರು 600,000 ಮಹಿಳೆಯರು ಸಾಯುತ್ತಿದ್ದಾರೆ. ಹೆರಿಗೆ ಸಂದರ್ಭದಲ್ಲಿ ಸಾಯುವವರ ಸಂಖ್ಯೆಯು ಆಫ್ರಿಕಾ ಮತ್ತು ಏಷ್ಯಾಗಳಲ್ಲೇ ಹೆಚ್ಚು. ಹೆರಿಗೆಯನ್ನು ತರಬೇತಿ ಹೊಂದಿಲ್ಲದವರು ಮಾಡುವುದೇ ಬಹುತೇಕ ಸಾವಿಗೆ ಕಾರಣಗಳಾಗಿವೆ. ಪೌಷ್ಟಿಕ ಆಹಾರದ ಕೊರತೆಯೂ ಮುಖ್ಯ ಕಾರಣಗಳಲ್ಲಿ ಒಂದು. ಪದೇ ಪದೇ ಮಕ್ಕಳಾಗುವುದೂ ಹೆರಿಗೆ ಸಮಯದಲ್ಲಿನ ಸಾವಿಗೆ ಕಾರಣವಾಗಿದೆ.

ಬಹುತೇಕ ಅಸಮಾನತೆಗೆ ಶಿಕ್ಷಣದಿಂದ ವಂಚಿತರಾಗಿರುವುದೇ ಕಾರಣವೆನ್ನಬಹುದು. ಅನೇಕ ರಾಷ್ಟ್ರಗಳಲ್ಲಿ ಸ್ತ್ರೀಪುರುಷರ ನಡುವಣ ಶೈಕ್ಷಣಿಕ ಅಂತರ ಕಡಿಮೆಯಾಗುತ್ತಿದ್ದರೂ ಸ್ತ್ರೀಯರಿಗಿಂಥ ಹೆಚ್ಚು ಪುರುಷರೇ ವಿದ್ಯಾವಂತರಾಗಿದ್ದಾರೆ. ಶೇಕಡ 80ರಷ್ಟು ಪುರುಷರು ವಿದ್ಯಾವಂತರಾಗಿದ್ದರೆ, ಶೇ. 64ರಷ್ಟು ಮಹಿಳೆಯರು ಮಾತ್ರ ವಿದ್ಯಾವಂತರು. ಇದು ಆಯಾ ಪ್ರದೇಶಗದಳ ಅಭಿವೃದ್ಧಿಯ ಮೇಲೂ ಅವಲಂಬಿತವಾಗಿರುವುದು ಸ್ಪಷ್ಟ. ಹಿಂದುಳಿದ ಪ್ರದೇಶವಾದ ಪಶ್ಚಿಮ ಆಫ್ರಿಕಾದಲ್ಲಿ ಶೇಕಡ 38ರಷ್ಟು ಮಹಿಳೆಯರು ಮಾತ್ರ ಓದಿ ಬರೆಯಬಲ್ಲರು; ಸಣ್ಣ ಪುಟ್ಟ ಹೇಳಿಕೆಗಳನ್ನು ಓದಿ ಅರ್ಥಮಾಡಿಕೊಳ್ಳಬಲ್ಲರು. ಈ ಪ್ರದೇಶದಲ್ಲಿ ಶೇ. 54ರಷ್ಟು ಪುರುಷರು ಓದಿ ಬರೆಯಬಲ್ಲರು. ಅದೇ ಅಭಿವೃದ್ಧಿ ಹೊಂದಿದ ಪ್ರದೇಶಗಳಲ್ಲಿ ಹೆಚ್ಚೂ ಕಮ್ಮಿ ಎಲ್ಲಾ ಬಾಲಕ, ಬಾಲಕಿಯರು ಕೊನೆ ಪಕ್ಷ ಪ್ರೌಢ ಶಿಕ್ಷಣ ಮಟ್ಟವನ್ನಾದರೂ ಮುಟ್ಟುತ್ತಾರೆ. ಅಭಿವೃದ್ಧಿಶೀಲ ಹಾಗೂ ಹಿಂದುಳಿದ ಪ್ರದೇಶಗಳಲ್ಲಿ ಶಾಲೆ ಸೇರುವ ಮಕ್ಕಳಲ್ಲಿ ಬಾಲಕರೇ ಹೆಚ್ಚು. ಪ್ರೌಢ ಶಿಕ್ಷಣಕ್ಕೆ ಹೆಚ್ಚು ಬಾಲಕಿಯರು ಬಾರದಿರುವುದಕ್ಕೆ ಅನೇಕ ಕಾರಣಗಳಿವೆ. ಇದರಲ್ಲಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಕಾರಣಗಳಾದ ಅತಿ ಕಡಿಮೆ ವಯಸ್ಸಿನಲ್ಲೇ ಮದುವೆ ಮತ್ತು ಮಕ್ಕಳು, ಮನೆ ಜವಾಬ್ದಾರಿ, ಹೆಣ್ಣುಮಕ್ಕಳಿಗಿಂತ ಗಂಡು ಮಕ್ಕಳಿಗೆ ಶಿಕ್ಷಣದ ಅವಶ್ಯಕತೆ ಹೆಚ್ಚು ಎಂಬ ಪೋಷಕರ ನಂಬಿಕೆ, ಮನೆ ಹೊರಗೆ ಬಾಲಕಿಯರ ರಕ್ಷಣೆ ಪ್ರಶ್ನೆ, ಸೀಮಿತ ಉದ್ಯೋಗ ಅವಕಾಶ ಇವು ಕಾರಣಗಳಲ್ಲಿ ಸೇರಿವೆ. ಉದ್ಯೋಗಸ್ಥ ಮಹಿಳೆ ಮನೆ, ಮಕ್ಕಳ ಜವಾಬ್ದಾರಿಯನ್ನೂ ಹೊರುತ್ತಾಳೆ. ಅಲ್ಲದೆ ಕೃಷಿಯಂಥ ಕ್ಷೇತ್ರಗಳಲ್ಲಿ ಅವರದು ವೇತನ ರಹಿತ ದುಡಿಮೆಯೆಂದೇ ಹೇಳಬಹುದು.

ಈಚಿನ ವಿಶ್ವ ಮಹಿಳಾ ಸಮಾವೇಶವು ವಯಸ್ಕ ಮಹಿಳೆಯರು (ಅಡೋಲೆಸೆಂಟ್), ವೃದ್ಧ ಮಹಿಳೆಯರು ಹಾಗೂ ಮನೆ ಯಜಮಾನ್ಯ ಹೊತ್ತ ಮಹಿಳೆಯರ ಸಮಸ್ಯೆಗಳನ್ನು ವಿಶೇಷವಾಗಿ ಪರಿಗಣಿಸಿದೆ. ವಿಶ್ವದ ಜನಸಂಖ್ಯೆಯ ಐದನೇ ಒಂದು ಭಾಗದಷ್ಟಿರುವ 10-19ರ ವಯೋಮಾನದ ಈ ಕಿರಿಯರ ಗುಂಪಿಗೆ ತನ್ನದೇ ಸಮಸ್ಯೆಗಳಿವೆ. ಈ ಕಿರಿಯರಿಗೆ ಶಿಕ್ಷಣ, ಉದ್ಯೋಗ ಮತ್ತು ಆರೋಗ್ಯದ ಅಗತ್ಯಗಳಿವೆ. ಕಡಿಮೆ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಸರಾಸರಿ ಶೇ. 40ರಷ್ಟು ಮಹಿಳೆಯರು 20ನೇ ವಯಸ್ಸು ಮುಟ್ಟುವ ಮುನ್ನವೇ ತಾಯಂದಿರಾಗಿರುತ್ತಾರೆ. ಇವರು ಗರ್ಭ ಸಮಸ್ಯೆ, ಹೆರಿಗೆ, ಗರ್ಭಪಾತ ಕಾರಣಗಳಿಂದ ಸಾಯುವುದು ಹೆಚ್ಚು. ಅಲ್ಲದೆ 15-19ರ ವಯೋಮಾನದ ಹದಿಹರೆಯದವರು ಏಯ್ಡ್ಸ್‌ನಂಥ ರೋಗಗಳಿಗೆ ತುತ್ತಾಗುವುದು ಹೆಚ್ಚಾಗುತ್ತಿದೆ. ಈ ಕಿರಿಯರನ್ನು ರಕ್ಷಿಸುವುದು ಸಮಾಜದ ಕರ್ತವ್ಯವಾಗಿದೆ. ಅವರಿಗೆ ಸಾಮಾಜಿಕ, ಆರ್ಥಿಕ ಸಂಪನ್ಮೂಲಗಳ ಕೊರತೆ ಇರುತ್ತದೆ. ವಿಶ್ವದ ಜನಸಂಖ್ಯೆಯಲ್ಲಿ ಶೇ. 10ರಷ್ಟು ಮಂದಿ 60 ಮತ್ತು ಅದಕ್ಕಿಂತ ಹೆಚ್ಚು ವಯಸ್ಸಿನವರು. ಜನರು ಹೆಚ್ಚು ಕಾಲ ಬದುಕುವುದರಿಂದ ಹಾಗೂ ಮಕ್ಕಳ ಸಂಖ್ಯೆ ಕಡಿಮೆ ಆಗುವುದರಿಂದ 2025ನೇ ವರ್ಷದ ವೇಳೆಗೆ ವೃದ್ಧರ ಸಂಖ್ಯೆ ಹೆಚ್ಚುತ್ತದೆ. ಗಮನಾರ್ಹವೆಂದರೆ ವೃದ್ಧ ಮಹಿಳೆಯರ ಸಂಖ್ಯೆಯೇ ಹೆಚ್ಚು. ಆದರೆ ಸಂಗಾತಿ ಇಲ್ಲದೆ ವೃದ್ಧಾಪ್ಯ ಕಳೆಯುವ ಮಹಿಳೆಯರೇ ಹೆಚ್ಚು. ಏಕೆಂದರೆ ಮಹಿಳೆಯರು ಸಾಮಾನ್ಯವಾಗಿ ತಮಗಿಂತ ವಯಸ್ಸಿನಲ್ಲಿ ಹಿರಿಯರಾದವರನ್ನು ಮದುವೆಯಾಗುತ್ತಾರೆ; ಪುರುಷರಿಗಿಂತ ಹೆಚ್ಚು ಕಾಲ ಬದುಕುತ್ತಾರೆ; ಹಾಗೂ ಪುನರ್ ವಿವಾಹವಾಗುವುದು ಕಡಿಮೆ. ಕೌಟುಂಬಿಕ ವ್ಯವಸ್ಥೆಯಲ್ಲಿ ಬದಲಾವಣೆಗಳು ಆಗುತ್ತಿರುವುದರಿಂದ ಮನೆಯ ಯಜಮಾನ್ಯವನ್ನು ಹೊರುವ ಮಹಿಳೆಯರ ಸಂಖ್ಯೆ ಹೆಚ್ಚಾಗುತ್ತಿದೆ. ಮನೆಯಲ್ಲಿ ಪುರುಷ ಸಂಗಾತಿ ಇಲ್ಲದೆ ಅವರು ಇಡೀ ಗೃಹಕೃತ್ಯ ಜವಾಬ್ದಾರಿ ಹೊರಬೇಕಾಗುತ್ತದೆ. ಸಂಗಾತಿ ಮನೆ ಬಿಟ್ಟು ಹೋಗುವುದು, ಗಂಡ-ಹೆಂಡತಿ ಪ್ರತ್ಯೇಕಗೊಳ್ಳುವುದು, ವಿಚ್ಛೇದನದಂಥ ಕೌಟುಂಬಿಕ ಕಾರಣಗಳೂ ವಲಸೆ, ವಿವಾಹದಾಚೆ ಮಕ್ಕಳನ್ನು ಹೆರುವುದು ಇವೇ ಮುಂತಾದವು ಇದಕ್ಕೆ ಕಾರಣ.

ಹೀಗೆ ಬದಲಾಗುತ್ತಿರುವ ಪರಿಸ್ಥಿತಿಗೆ ಅನುಗುಣವಾಗಿ ಮಹಿಳೆಯರ ಸಮಸ್ಯೆಗಳೂ ಬೇರೆ ಬೇರೆ ಆಯಾಮ ಪಡೆದುಕೊಳ್ಳುತ್ತಿದ್ದು, ಅದನ್ನು ಎದುರಿಸುವ, ಪರಿಹರಿಸುವ ಮನೋಭಾವ ದೃಢವಾಗಬೇಕಾಗಿದೆ.

- ದೇವಿ.

# ಮಹಿಳಾ ಮೀಸಲಾತಿ ಮತ್ತೆ ಶೈತ್ಯಾಗಾರಕ್ಕೆ

ಮೀಸಲಾತಿ ಮಸೂದೆ ಮೂರನೆಯ ಬಾರಿಗೆ ಮತ್ತೊಮ್ಮೆ ಶೈತ್ಯಾಗಾರಕ್ಕೆ ಹೋಗಿದೆ. ಸಂವಿಧಾನದ (84ನೇ ತಿದ್ದುಪಡಿ) 1998ರ ಮಸೂದೆ ಲೋಕಸಭೆ ಮತ್ತು ರಾಜ್ಯ ಶಾಸನಸಭೆಗಳಲ್ಲಿ ಮಹಿಳೆಯರಿಗೆ ಶೇಕಡ 33ರಷ್ಟು ಮೀಸಲಾತಿ ಕೊಡಬೇಕೆಂದಿರುವುದು ಮಹಿಳಾ ಅಧಿಕಾರೀಕರಣದ ಪ್ರಕ್ರಿಯೆಯಲ್ಲಿ ಒಂದು ಮಹತ್ವದ ಹೆಜ್ಜೆ. ಮಹಿಳೆಯರ ಅಭಿವೃದ್ಧಿ, ಬೆಳವಣಿಗೆಯ ಬಗ್ಗೆ ಬಾಯಿಮಾತಿನಲ್ಲಿ ಕೊಚ್ಚಿಕೊಳ್ಳುವ, ಚುನಾವಣೆಯ ಸಂದರ್ಭದಲ್ಲಿ ದೊಡ್ಡ ಘೋಷಣೆಗಳನ್ನು ಮಾಡುವ ಪಿತೃಪ್ರಧಾನ ಮೌಲ್ಯಗಳ ಆರಾಧಕ ರಾಜಕೀಯ ಪಕ್ಷಗಳು ಒಂದಲ್ಲ ಒಂದು ಸಂದರ್ಭದಲ್ಲಿ ಈ ಮಹಿಳಾ ಮೀಸಲಾತಿಯನ್ನು ವಿರೋಧಿಸುತ್ತಲೇ ಬಂದಿವೆ.

1996ರಲ್ಲಿ ದೇವೇಗೌಡರ ಪ್ರಧಾನ ಮಂತ್ರಿತ್ವದಲ್ಲಿ ಈ ಮಸೂದೆ ಚರ್ಚೆಗೆ ಮಂಡಿತವಾದಾಗ ಆಡಳಿತ ಪಕ್ಷದ, ಜನತಾದಳದ ಅಧ್ಯಕ್ಷ ಶರದ್‌ಯಾದವರೇ ಓ.ಬಿ.ಸಿ.ಯ ನೆಪವೊಡ್ಡಿ ಮಸೂದೆ ಮಂಡಿತವಾಗದಿರಲು ಅಡ್ಡಗಾಲು ಹಾಕಿದರು. ಲೋಕಸಭೆಯಲ್ಲಿ ಇದು ಚರ್ಚೆಗೆ ಬಂದಾಗ ಎಡಪಕ್ಷಗಳನ್ನು ಹೊರತುಪಡಿಸಿ ಎಲ್ಲ ರಾಜಕೀಯ ಪಕ್ಷಗಳೂ ಸಭೆಯಲ್ಲಿ ಗೈರು ಹಾಜರಾದದ್ದು ಮಹಿಳಾ ಮೀಸಲಾತಿಗೆ ಆ ಪಕ್ಷಗಳು ತೋರಿದ ನಿಲುವೇ ಆಗಿದೆ. ಗುಜ್ರಾಲ್ ಪ್ರಧಾನಮಂತ್ರಿತ್ವದಲ್ಲಿ ಮತ್ತೊಮ್ಮೆ ಈ ಮಸೂದೆ ಮಂಡಿತವಾದಾಗ ಅವರ ಪಕ್ಷದಿಂದಲೇ ಭಾರಿ ಪ್ರತಿರೋಧವನ್ನು ಎದುರಿಸಿತು. ಚುನಾವಣೆಯಲ್ಲಿ ತಾನು ಮಹಿಳಾ ಮೀಸಲಾತಿ ಪರ ಎಂದು ಘೋಷಿಸಿಕೊಂಡ ಬಿ.ಜೆ.ಪಿ. ಪಕ್ಷವು ಹಿಂದೆ ಅವರ ಪಕ್ಷದ ಉಮಾಭಾರತಿ ಮತ್ತು ಗಂಗಾಚರಣ್ ಮಸೂದೆಯನ್ನು ವಿರೋಧಿಸಿದ್ದನ್ನು ಮರೆತಿತು. ಈಗ ವಾಜಪೇಯಿ ಪ್ರಧಾನ ಮಂತ್ರಿತ್ವದ ಸಂದರ್ಭದಲ್ಲಿ ಮಹಿಳಾ ಮೀಸಲಾತಿಗೆ ಸಂದ ಮರ್ಯಾದೆ ಭಾರತದ ರಾಜಕೀಯ ಪ್ರಪಂಚದ ಪುರುಷರ ಮನೋಲೋಕವನ್ನು ಬಿಚ್ಚಿಡುತ್ತದೆ.

ಸಂಸತ್ತಿನಲ್ಲಿ ಹಾಗೂ ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿಯ ಮಸೂದೆಯನ್ನು ಮಂಡಿಸಲು ತಾನು ಬದ್ಧ ಎಂದು ಬಿ.ಜೆ.ಪಿ. ದೊಡ್ಡದಾಗಿ ಹೇಳಿಕೊಂಡರೂ ಪ್ರಸಕ್ತ ಅಧಿವೇಶನದಲ್ಲಿ ಅದನ್ನು ಮಂಡಿಸುವಲ್ಲಿ ಸಂಪೂರ್ಣವಾಗಿ ಸೋತಿದೆ. ಸಮಾಜವಾದಿ ಪಕ್ಷ ಮತ್ತು ಆರ್.ಜೆ.ಡಿ. ಪಕ್ಷ ಬಳಸಿದ ವಿಧಾನಗಳು, ಜುಲೈ 13ರಂದು ಈ ಮಸೂದೆಯ ಮಂಡನೆಯಲ್ಲಿ ಬಳಸಿದ ತಂತ್ರಗಳು, ವರ್ತಿಸಿದ ರೀತಿ ನಿಜಕ್ಕೂ ಖಂಡನೀಯ. ಕಾನೂನು ಮಂತ್ರಿಗಳು ಮಸೂದೆಯನ್ನು ಮಂಡಿಸಲು ಅನುಮತಿ ಕೋರಲು ಎದ್ದು ನಿಂತಾಗ ಸದಸ್ಯರು ಆಗಬಹುದು ಎಂದು ಹೇಳುವ ಮೊದಲೇ ಸಭಾಧ್ಯಕ್ಷ ಶ್ರೀಯುತ ಬಾಲಯೋಗಿಯವರು ಮಧ್ಯ ಪ್ರವೇಶಿಸಿ ಸದನದ ಒಪ್ಪಿಗೆಯೊಂದಿಗೆ ಮಸೂದೆಯ ಮಂಡನೆಯನ್ನು ಸದ್ಯಕ್ಕೆ ಮುಂದೂಡಿರುವುದಾಗಿ ಹೇಳಿದರು. ಇದರಿಂದ ಅಧಿವೇಶನ ಆರಂಭವಾಗುವ ಮೊದಲೇ ಈ ಮಸೂದೆಯ ಮೇಲೆ ಒಮ್ಮತವಿಲ್ಲ ಎಂಬ ನೆವದಲ್ಲಿ ಮಸೂದೆ ಮಂಡನೆಯನ್ನು ಮುಂದೂಡಲು ಅವರು ನಿರ್ಧರಿಸಿದ್ದರು ಎಂಬುದು ಸ್ಪಷ್ಟ.

33 ಶೇಕಡದೊಳಗೆ ಓ.ಬಿ.ಸಿ. ಮತ್ತು ಮುಸ್ಲಿಂ ಮಹಿಳೆಯರಿಗೆ ಪ್ರಾತಿನಿಧ್ಯ ಕೇಳುತ್ತಿರುವವರಿಗೆ ಆ ಅಂಶ ಆ ವಿಭಾಗದ ಮಹಿಳೆಯರ ಬಗೆಗಿರುವ ಕಾಳಜಿಯಾಗಿರದೆ ಮಹಿಳಾ ಮೀಸಲಾತಿ ಮಸೂದೆಯನ್ನು ಶಾಸನವಾಗುವುದನ್ನು ತಡೆಯಲು ನೆವವಾಗಿ ಬಳಸುತ್ತಿದ್ದಾರೆಂಬುದು ಸೂರ್ಯಸ್ಪಷ್ಟವಾಗಿದೆ. ಇದನ್ನು ಆ ಮಹಿಳಾ ಸಮುದಾಯವೂ ಅರಿತು ಒಟ್ಟಾರೆಯಾಗಿ ಮಹಿಳಾ ಮೀಸಲಾತಿಯ ಹೋರಾಟಕ್ಕೆ ಬದ್ಧವಾಗಬೇಕಿದೆ. ಇಂದು ಮುಸ್ಲಿಂ ಮತ್ತು ಓ.ಬಿ.ಸಿ. ಮಹಿಳೆಯರ ಪರವಾಗಿ ಅನುಕಂಪ ತೋರುತ್ತಿರುವಂಥ ಮಂದಿ ಶಾಬಾನು ಪ್ರಕರಣದಲ್ಲಿ ಯಾರ ಪರವಾಗಿದ್ದರು ? ಭಾನ್ವರಿದೇವಿಗೆ ನ್ಯಾಯಾಲಯದಲ್ಲಿ ನ್ಯಾಯ ದೊರಕದಾದಾಗ, ಅವಳ ಮೇಲೆ ಹಲ್ಲೆ ನಡೆದಾಗ ಎಲ್ಲಿದ್ದರು? ಅಂದೂ ಈ ಎಲ್ಲ ದಮನಿತ ಮಹಿಳೆಯರ ಪರವಾಗಿ ಹೋರಾಡಿದವರಲ್ಲಿ ಬಾಬ್‌ಕಟ್ ಮಹಿಳೆಯರೂ ಸೇರಿದ್ದರು ಎಂಬುದು ಈ ಜನಕ್ಕೆ ಮರೆತು ಹೋದರೆ ಆಶ್ಚರ್ಯವಿಲ್ಲ! ಕನಿಷ್ಠ ಬಿ.ಟಿ.ಎಸ್. ಬಸ್‌ನಲ್ಲಿ ಸ್ಥಳ ಕೊಡಲು ಸಮ್ಮತಿಸದ ಗಂಡಸರಿಗೆ ಅವರ ಭದ್ರ ಕೋಟೆಯಾದ ರಾಜಕೀಯ ಅಧಿಕಾರವನ್ನು ಹಂಚಿಕೊಳ್ಳಬೇಕೆಂದರೆ ಎಷ್ಟು ಸಂಕಟವಾಗಬಹುದು ? ಎಂಬುದು ಇದರಿಂದ ತಿಳಿದುಬರುತ್ತದೆ.

ಮಹಿಳಾ ಮೀಸಲಾತಿಯೆನ್ನುವುದು ಉಳಿದ ಇತರ ಮೀಸಲಾತಿಗಳಿಗಿಂತ ಭಿನ್ನವಾದದ್ದೆಂಬುದನ್ನು ನಾವು ಗಮನಿಸಬೇಕು. ಎಲ್ಲ ಜಾತಿ, ವರ್ಗಗಳನ್ನು, ಸಮಸ್ಯೆ, ವೈಶಿಷ್ಟ್ಯತೆಗಳನ್ನು ಒಳಗೊಳ್ಳುವ ಈ ಲಿಂಗಜಾತಿಯ ಸಮುದಾಯಕ್ಕೆ ತನ್ನದೇ ಆದ ವಿಶಿಷ್ಟ ಲಕ್ಷಣಗಳು, ಸಮಸ್ಯೆಗಳೂ ಇವೆ. ಇಂದು ಓ.ಬಿ.ಸಿ. ಮತ್ತು ಇತರ ಮಹಿಳೆಯರ ಬಗ್ಗೆ ಕಾಳಜಿ ತೋರುತ್ತಿರುವ ರಾಜಕೀಯ ಪಕ್ಷಗಳು ತಮ್ಮ ಪಕ್ಷಗಳಲ್ಲಿ ಮಹಿಳೆಯರಿಗೆ ಚುನಾವಣೆಗೆ ಟಿಕೆಟ್ ಕೊಡುವಾಗ ಅಲ್ಲಿ ಓ.ಬಿ.ಸಿ. ಮತ್ತು ಮುಸ್ಲಿಂ ಮಹಿಳೆಯರಿಗೆ ಆದ್ಯತೆ ಕೊಡಬಾರದೇಕೆ? ತಮ್ಮ ಹೆಂಡತಿಯರನ್ನು ಮುಖ್ಯಮಂತ್ರಿ ಮಾಡುವಷ್ಟು ಔದಾರ್ಯ ಈ ವಿಷಯದಲ್ಲಿ ಅವರಿಗಿರಲು ಸಾಧ್ಯವಿಲ್ಲವೇ?

ಕೊನೆಗೆ, ಈ ವಿಷಯಕ್ಕೆ ಚುನಾಯಿತ ಮಹಿಳಾ ಸಮುದಾಯ ತೋರಿಸಿದ ಪ್ರತಿಕ್ರಿಯೆ ಸ್ವಾಗತಾರ್ಹವಾಗಿದೆ. ಇತ್ತೀಚೆಗೆ ಆಂಧ್ರಪ್ರದೇಶದಲ್ಲಿ ನಡೆದ ಮಹಿಳಾ ಎಂ.ಎಲ್.ಎ. ಮತ್ತು ಎಂ.ಪಿ.ಗಳ ರಾಷ್ಟ್ರೀಯ ಸಮಾವೇಶದಲ್ಲಿ ಮಹಿಳೆಯರು ರಾಜಕೀಯ ಸಮಸ್ಯೆಗಳನ್ನು ಚರ್ಚಿಸುವುದರೊಂದಿಗೆ 'ಮೀಸಲಾತಿ' ಪದದ ಬಗೆಗೆ ಅವರು ಆಕ್ಷೇಪ ವ್ಯಕ್ತಪಡಿಸಿದರು. ಮಹಿಳೆಯರು ಇಂದು ಕೇಳುತ್ತಿರುವುದು ಭಿಕ್ಷೆಯನ್ನಲ್ಲ, 'ಪ್ರಾತಿನಿಧ್ಯ'ವನ್ನಾದ್ದರಿಂದ 'ಮಹಿಳಾ ಮೀಸಲಾತಿ' ಎನ್ನುವುದಕ್ಕಿಂತ ಇದನ್ನು ಮಹಿಳಾ ಪ್ರಾತಿನಿಧ್ಯಕ್ಕಾಗಿ ಹೋರಾಟ ಎನ್ನುವುದೇ ಹೆಚ್ಚು ಸೂಕ್ತ ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರ ಹಿನ್ನೆಲೆಯಲ್ಲೇ ಇಂದು ಮಹಿಳೆಯರು ಪಕ್ಷಗಳೊಳಗೂ ಪ್ರಾತಿನಿಧ್ಯಕ್ಕಾಗಿ ಹೋರಾಟ ನಡೆಸುವ ಹುರುಪು ಪಡೆದಿದ್ದಾರೆ. ಕಾಂಗ್ರೆಸ್ ಮತ್ತು ಜನತಾದಳದ ಪಕ್ಷಗಳೊಳಗಿನ ಮಹಿಳೆಯರು ಹೆಚ್ಚಿನ ಮಹಿಳಾ ಪ್ರಾತಿನಿಧ್ಯಕ್ಕಾಗಿ ಹೋರಾಡುತ್ತಿರುವುದನ್ನು ಕಾಣಬಹುದಾಗಿದೆ.

ಎಚ್ಚೆತ್ತ ಈ ಪ್ರಕ್ರಿಯೆಯಿಂದಾಗಿ ಶೈತ್ಯಾಗಾರದಲ್ಲಿರುವ ಮಹಿಳಾ ಮೀಸಲಾತಿ ಮಸೂದೆ ಶವಾಗಾರಕ್ಕೆ ಹೋಗದಂತೆ ತಡೆಯಬಲ್ಲುದೇ ಎಂದು ಕಾದುನೋಡಬೇಕಾಗಿದೆ.

★ ★ ★ ★

## ಶಾಂತಿ ಪ್ರೇಮ ಸಹನೆ - ಸಹಬಾಳ್ವೆ ಇದು ನಮ್ಮ ಮತವಾಗಲಿ

ದ್ವೇಷವನ್ನು ವಿರೋಧಿಸಿ ಮತೀಯ ಅಂಧಾಭಿಮಾನವನ್ನು ದೂರ ಮಾಡಿ
ಮತಭ್ರಾಂತಿಯನ್ನು ತಿರಸ್ಕರಿಸಿ ನಮ್ಮ ರಾಷ್ಟ್ರದ ಸಂದ ಜಾತ್ಯಾತೀತ
ಹಂದರವನ್ನು ವಿಚ್ಛಿದ್ರಕಾರಕ ಶಕ್ತಿಗಳು ಹಾಳು ಮಾಡಲು ಎಡೆಗೊಡಬೇಡಿ.
ಭಾರತದ ಒಗ್ಗಟ್ಟು ಹಾಳಾದರೆ ರಾಷ್ಟ್ರ ಶಕ್ತಿ ಕುಂದುತ್ತದೆ. ಭಾರತ ಅಶಕ್ತವಾಗಲು ನಾವೆಂದಿಗೂ ಅವಕಾಶ ನೀಡಬಾರದು.

ಶತಶತಮಾನಗಳಿಂದ ಭಾರತದ ಪವಿತ್ರ ನೆಲದಲ್ಲಿ ವಿವಿಧ ಜನಾಂಗ, ಜಾತಿ,
ಸಂಸ್ಕೃತಿಗಳು ಒಟ್ಟಿಗೇ ಅರಳಿವೆ. ಬಾಳಿ ಬದುಕಿವೆ. ರಾಷ್ಟ್ರದ ಸಮಗ್ರ ಪ್ರಗತಿಗೆ ತಮ್ಮ ಕೊಡುಗೆಯನ್ನು
ನೀಡಿ, ದೇಶಕ್ಕೆ ವಿಶ್ವದಲ್ಲಿಯೇ ಸರಿಸಾಟಿಯಿಲ್ಲದ ಅದ್ವಿತೀಯ ಸ್ಥಾನವನ್ನು ಗಳಿಸಿಕೊಟ್ಟಿವೆ.

ನಮ್ಮ ರಾಷ್ಟ್ರದ ಜಾತ್ಯಾತೀತ ತಳಹದಿ ಅಭದ್ರವಾಗುತ್ತಿದೆ.
ಮತೀಯ ದ್ವೇಷಾಸೂಯೆಗಳಿಂದ ನಮ್ಮ ಪ್ರಗತಿ ಕುಂಠಿತವಾಗಿ ಆರ್ಥಿಕ
ವಿಕಾಸ ಅಸ್ತವ್ಯಸ್ತವಾಗುವುದಕ್ಕೆ ಅವಕಾಶ ಮಾಡಿಕೊಡುವುದು ಸರಿಯೆ? ವಿಮರ್ಶಿಸಿ ನೋಡಿ.

ನಮ್ಮ ರಾಜ್ಯಾಂಗದಲ್ಲಿ ಅಳವಡಿಸಿರುವ ಪವಿತ್ರವಾದ ಜಾತ್ಯಾತೀತ ಆದೇಶಗಳಿಗೆ ಕಳಂಕ
ಆಗುವುದು ನ್ಯಾಯವೇ? ವಿಚಾರ ಮಾಡಿ.

ರಾಷ್ಟ್ರ ಶಾಂತಿ ಮತ್ತು ಪ್ರಗತಿಗಾಗಿ ಒಮ್ಮತದಿಂದ ಒಂದುಗೂಡಿ.
ಕೋಮು ಸೌಹಾರ್ದದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ.

ಮತೀಯ ಮನೋವಿಕಾರಗಳನ್ನು ಕಿತ್ತೊಗೆದು ಒಗ್ಗಟ್ಟು - ಒಮ್ಮನಸ್ಸಿನಿಂದ ತಲೆ ಎತ್ತಿ ನಿಲ್ಲೋಣ.
''ವಿಶ್ವದ ಎಲ್ಲಾ ರಾಷ್ಟ್ರಗಳ ಎಲ್ಲ ಜನಾಂಗಗಳ ತಿರಸ್ಕೃತಗೊಂಡವರಿಗೆ ಮತ್ತು ನಿರಾಶ್ರಿತರಿಗೆ ಆಶ್ರಯ ನೀಡಿದ ಪವಿತ್ರ ರಾಷ್ಟ್ರ ನನ್ನದೆಂಬ ಹೆಮ್ಮೆ ಮತ್ತು ಅಭಿಮತ ನನ್ನದು'' - ಎಂಬ ಸ್ವಾಮಿ ವಿವೇಕಾನಂದರ ವಾಕ್ಯವನ್ನು ನಾವೆಲ್ಲರೂ ಪುನರುಚ್ಚರಿಸೋಣ.

ಕರ್ನಾಟಕ ವಾರ್ತೆ.

## ಪೊಲೀಸ್ ರಾಜ್ಯವಾದ ಬಾಗೂರು - ನವಿಲೆ

ಬಾಗೂರು-ನವಿಲೆ ಸುರಂಗ ಕಾಲುವೆಯಿಂದಾಗಿ ಸಂತ್ರಸ್ತರಾದ ಬಾಗೂರು ಸುತ್ತಮುತ್ತಲ ಗ್ರಾಮದ ಜನರು ತಮಗೆ ದಕ್ಕಬೇಕಾದ ನ್ಯಾಯಯುತ ಪರಿಹಾರಕ್ಕಾಗಿ 95 ದಿನಗಳ ಹೋರಾಟ ನಡೆಸುತ್ತಿದ್ದ ಸಂದರ್ಭದಲ್ಲಿ ಪೋಲೀಸರು ನಡೆಸಿರುವ ದೌರ್ಜನ್ಯ, ಅಧಿಕಾರದ ಗದ್ದುಗೆಯಲ್ಲಿರುವವರ ಉದಾಸೀನ ಮತ್ತು ಅಹಂಕಾರ ಮುಗಿಲು ಮುಟ್ಟಿದೆಯೆನ್ನುವುದನ್ನು ಸೂಚಿಸುತ್ತದೆ. ಪತ್ರಿಕೆಗಳಲ್ಲಿ ವರದಿಯಾಗಿರುವುದನ್ನು ನೋಡಿದರೆ ವಸಾಹತುಶಾಹಿ ಸರ್ಕಾರದ ಆಡಳಿತದಲ್ಲಿ ಭಾರತವು ಎದುರಿಸಿದ ಜಲಿಯನ್‌ವಾಲಾಬಾಗ್ ದುರಂತವನ್ನೇ ಈ ಘಟನೆ ನೆನಪಿಸುತ್ತಿದೆ.

ಬಾಗೂರು-ನವಿಲೆ ಸುರಂಗ ಸಂತ್ರಸ್ತ ರೈತರ ಚಳುವಳಿಯಲ್ಲಿ ಹೆಂಗಸರು, ಗಂಡಸರು, ವೃದ್ಧರೂ, ಮಕ್ಕಳೂ ಎಲ್ಲರೂ ಭಾಗವಹಿಸಿದ್ದರು. ಇದು ಅವರ ಬದುಕಿನ, ಅಸ್ತಿತ್ವದ ಪ್ರಶ್ನೆ. ಶಾಂತಿಯುತ ಚಳುವಳಿ ಉಗ್ರರೂಪ ತಳೆಯುವಂತೆ ಮಾಡಿದ ಸರ್ಕಾರ, ಅದನ್ನು ನಿಯಂತ್ರಿಸಲಾಗದ ಪೊಲೀಸ್ ಯಂತ್ರ, ಗ್ರಾಮದ ನಾಗರೀಕರನ್ನು ನಡೆಸಿಕೊಂಡ ರೀತಿ ನಾಚಿಕೆ ತರುವಂತಿದೆ. ಪ್ರತಿಭಟನೆ ಮತ್ತು ಹೋರಾಟದ ಸದ್ದು ಅಡಗಿಸಲು ಪೋಲೀಸರು ಅನುಸರಿಸಿದ ಕ್ರಮ ಎಲ್ಲ ಪ್ರಜಾಪ್ರಭುತ್ವ ಪ್ರೇಮಿಗಳು ಖಂಡಿಸುವಂತಹುದಾಗಿದೆ. ಘಟನೆಯನ್ನು ವರದಿಮಾಡಬಯಸಿದ ಪತ್ರಕರ್ತರನ್ನು ಥಳಿಸಿ, ಬಂಧಿಸಿರುವ ಪೋಲೀಸರ ಕೃತ್ಯ ಖಂಡನೀಯ.

ಹೋರಾಟದ ಮುಂಚೂಣಿಯಲ್ಲಿದ್ದ ವಿದ್ಯಾರ್ಥಿ ನಾಯಕಿಯರಾದ ಆಶಾ ಮತ್ತು ಸುಧಾರವರನ್ನು ಪೋಲೀಸರು ಅತ್ಯಂತ ಕೆಟ್ಟದಾಗಿ ನಡೆಸಿಕೊಂಡಿದ್ದಾರೆ. ಮಹಿಳೆಯರನ್ನು ಬಂಧಿಸಲು ಮಹಿಳಾ ಪೋಲೀಸರನ್ನು ಉಪಯೋಗಿಸಿಲ್ಲವೆನ್ನುವುದು ಪೋಲೀಸ್ ಇಲಾಖೆಯ ತಪ್ಪಾಗಿರುವುದಲ್ಲದೆ ಚಳುವಳಿಯಲ್ಲಿ ಭಾಗವಹಿಸಿದರೆಂಬ ಕಾರಣಕ್ಕಾಗಿ ಹೆಂಗಸರನ್ನು ಜೈಲಿಗೆ ನೂಕಿ ಅಸಾಧ್ಯವಾಗಿ ಹೊಡೆದಿರುವುದು ಮತ್ತೂ ತಪ್ಪು. ಈ ಎಲ್ಲಾ ಘಟನೆಗಳಿಗೂ ಕೂಲಂಕಶವಾಗಿ ನ್ಯಾಯಾಂಗ ತನಿಖೆಯಾಗಲೇಬೇಕು.

ಸುವರ್ಣ ಸ್ವಾತಂತ್ರ್ಯೋತ್ಸವ ಆಚರಿಸುತ್ತಿರುವ ಭಾರತ ದೇಶದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ, ಪ್ರತಿಭಟಿಸುವ ಸ್ವಾತಂತ್ರ್ಯಕ್ಕೆ ಕುತ್ತು ಬಂದಿರುವುದು 'ಸ್ವಾತಂತ್ರ್ಯ'ದ ಮಹತ್ವವನ್ನೇ ಅಣಕಿಸಿದಂತಲ್ಲವೇ? ಬಾಗೂರು-ನವಿಲೆ ಪ್ರಾಂತ್ಯವನ್ನು ಅಘೋಷಿತ ಪೋಲೀಸ್ ರಾಜ್ಯವನ್ನಾಗಿ ಮಾಡಿದ ಪೋಲೀಸರ ಕ್ರಮವನ್ನು, ಸರ್ಕಾರದ ಕಾರ್ಯಕ್ರಮಗಳನ್ನು ಇಲ್ಲಿನ ಜನತೆ ತಿರಸ್ಕರಿಸಿದ್ದು ಸ್ವಾಭಿಮಾನಿಗಳಿಗೆ ತಕ್ಕುದಾದ ನಡತೆಯಾಗಿದೆ. ಇನ್ನಾದರೂ ಸರ್ಕಾರ ಬಾಗೂರು-ನವಿಲೆ ಪ್ರಾಂತ್ಯದ ಜನರ ಮೇಲೆ ವಿಶೇಷವಾಗಿ ಅಲ್ಲಿನ ಮಹಿಳೆಯರ ಮೇಲೆ ನಡೆದ ಪೋಲೀಸ್ ದೌರ್ಜನ್ಯದ ತಪ್ಪಿತಸ್ಥರನ್ನು ಶಿಕ್ಷಿಸಿ ನೊಂದವರಿಗೆ ನ್ಯಾಯ ದೊರಕಿಸುವುದೇ?

- ಎನ್. ಗಾಯತ್ರಿ.

---

## ಲೋಕಸಭಾಧ್ಯಕ್ಷ ಪೀಠದಲ್ಲಿ ಮಹಿಳೆಯಿದ್ದಿದ್ದರೆ...

''ಓಬಿಸಿ ಮಹಿಳೆಯರ ಬಗ್ಗೆ ವಿಶೇಷ ಆತಂಕ ನೈಜವಾಗಿದ್ದಂತೆ ಕಾಣುವುದಿಲ್ಲ. ಈ ಮಸೂದೆಯನ್ನು ಮಂಡಿಸಬೇಕಾಗಿದ್ದ ದಿನ ಇದು ಕಂಡುಬಂತು. ಅಷ್ಟೆಲ್ಲ ಗದ್ದಲಗಳಿಂದಾಗಿ ಈ ಮಸೂದೆಯನ್ನು ಮಂಡಿಸಲಾಗಲಿಲ್ಲ ಎಂಬುದನ್ನು ನಾನು ನಂಬುವುದಿಲ್ಲ. ಉದಾಹರಣೆಗೆ, ಗಲಭೆ-ಗದ್ದಲ ನಡೆಯುತ್ತಿದ್ದಾಗಲೇ ಕಾಗದ ಪತ್ರಗಳನ್ನು ಮೇಜಿನ ಮೇಲಿಡುವ ಪ್ರಕಟಣೆ ಆಯ್ತು, ಕಾಗದ ಪತ್ರಗಳನ್ನು ಇಡಲಾಯಿತು. ಅದೇ ರೀತಿ ಮಂತ್ರಿಗಳು 'ಮಸೂದೆ ಮಂಡಿಸಲು ಸದನದ ಅನುಮತಿ ಕೋರುತ್ತೇನೆ'' ಎಂದು ಹೇಳಿದ್ದರೆ ಅದು ದಾಖಲಾಗುತ್ತಿತ್ತು. ಆಗ ಸಭಾಧ್ಯಕ್ಷರು ಈ ಮಸೂದೆಯ ಮಂಡನೆಗೆ ಯಾರು ಪರವಾಗಿದ್ದಾರೆ, ಯಾರು ವಿರೋಧವಾಗಿದ್ದಾರೆ ಎಂದು ಕೇಳಿ ಧ್ವನಿಮತದ ಮೂಲಕ ಸದನದ ಆಶಯವನ್ನು ನಿರ್ಧರಿಸಿ ಮಸೂದೆಯನ್ನು ಮಂಡಿಸಲು ಅವಕಾಶ ನೀಡಬಹುದಿತ್ತು. ಒಬ್ಬ ಮಹಿಳೆ ಸಭಾಧ್ಯಕ್ಷ ಪೀಠದಲ್ಲಿ ಇದ್ದಿದ್ದರೆ ಈ ಮಸೂದೆಯ ಮಂಡನೆಯಾಗುತ್ತಿತ್ತು.

**ಗೀತಾ ಮುಖರ್ಜಿ**
- ಸಿ.ಪಿ.ಐ. ಸಂಸತ್ ಸದಸ್ಯೆ

# ಸಮಸ್ಯೆಯಿಂದ ವಿಮುಖರನ್ನಾಗಿಸುವ ಹುನ್ನಾರ

ಕಡೆಗೂ ಮಹಿಳಾ ಮೀಸಲಾತಿ ಮಸೂದೆಯನ್ನು ನೆನೆಗುದಿಗೆ ತಳ್ಳಲಾಗಿದೆ. ಮಂಡಲ-ವಾದಿಗಳ ವಿರೋಧವು ತಾರಕ ಸ್ವರಕ್ಕೇರಿತು. ಮೇಲ್ಜಾತಿಗಳಿಗೆ ಸೇರಿದ ಮಹಿಳೆಯರ ಪೈಕಿ ಉಚ್ಚಧ್ವನಿಯೆತ್ತಿ ತಮ್ಮ ಆಶಯಗಳನ್ನು ಸಿದ್ಧಿಸಿಕೊಳ್ಳುವ ಸಾಮರ್ಥ್ಯವಿರುವ ಕೆಲವು ವಿಭಾಗಗಳಿಗೆ ಮಾತ್ರ ಈ ಮಸೂದೆಯಿಂದ ಅನುಕೂಲ ವಾಗುತ್ತದೆಂದು ಆತಂಕವಿರುವಂತೆ ಅವರು ತೋರ್ಪಡಿಸಿಕೊಂಡರು. ಈ ಆಕ್ಷೇಪವು ಸರ್ವಥಾ ನಗೆಗೇಡಿತನದ ಮಾತು. ಮಹಿಳೆಯರಿಗಾಗಿ ಕಾದಿರಿಸಲಾಗುವ ಸ್ಥಾನಗಳಲ್ಲಿ ಈಗ ಎಂತಹ ಸಾಮಾಜಿಕ ಹೊಂದಾಣಿಕೆಗಳು ಪ್ರಭಾವ ಬೀರುತ್ತಿವೆಯೋ ಅವೇ ಮುಂದುವರಿಯುವುದರಲ್ಲಿ ಸಂಶಯವಿಲ್ಲ. ಆ ಸ್ಥಾನಗಳಲ್ಲಿ ಸ್ಪರ್ಧಿಸುವವರ ಭವಿಷ್ಯವು ಈಗ ಹೇಗೆ ತೀರ್ಮಾನವಾಗುತ್ತದೋ ಆಗಲೂ ಹಾಗೆಯೇ ಆಗುತ್ತದೆ. ಭಗವತೀ ದೇವಿಯಂತಹ ಅನಕ್ಷರಸ್ಥ ಮಹಿಳೆಯೊಬ್ಬಳು ಸಾಕಷ್ಟು ಪ್ರಭಾವಶಾಲಿ ಪುರುಷ ಸ್ಪರ್ಧಿಗಳನ್ನು ಸೋಲಿಸಲು ಶಕ್ಯವಾಗಿರುವುದು ಇಂತಹ ಹೊಂದಾಣಿಕೆಗಳಿಂದ ಪ್ರಾರಂಭದಲ್ಲಿ ಎಲ್ಲೋ ಕೆಲವೆಡೆಗಳಲ್ಲಿ ಮೇಲ್ಜಾತಿಯ ಮಹಿಳೆಯರಿಗೆ ಸ್ವಲ್ಪಮಟ್ಟಿನ ಅನುಕೂಲವಾಗ ಬಹುದಾದರೂ ಕ್ರಮೇಣ ಅದು ಸಮತಟ್ಟಿನ ನೆಲೆಯನ್ನು ತಲುಪುವುದು ಖಂಡಿತ. ಮುಖ್ಯವಾಗಿ ಗಮನಿಸಬೇಕಾದ್ದೇನೆಂದರೆ ಈ ಮಸೂದೆಯಿಂದಾಗಿಯೇ ಹಿಂದುಳಿದ ಜಾತಿಯ ಹಾಗೂ ದಲಿತ ವರ್ಗಗಳ ಮಹಿಳೆಯರಿಗೆ ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯ ಅಧಿಕಾರ ಸ್ಥಾನಗಳಿಗೆ ಪ್ರವೇಶ ಪಡೆಯಲು ಅದ್ಭುತ ಪ್ರೇರಣೆ ದೊರಕುವ ಸಂಭವವಿದೆ. ಅದನ್ನು ತಡೆಗಟ್ಟುವುದರಿಂದ ಸಾಮಾಜಿಕ ನ್ಯಾಯದ ಪ್ರತಿಪಾದನೆ ಮಾಡುವವರೇ ತೀವ್ರ ಪ್ರತಿಗಾಮಿಗಳಾಗಿ ತಮ್ಮನ್ನು ತಾವು ಬಹಿರಂಗಗೊಳಿಸಿಕೊಂಡಿದ್ದಾರೆ. ರಾಬ್ರಿದೇವಿಯಂತಹವರನ್ನು ಈ ಜನ ಸಹಿಸಲು ಸಿದ್ಧರಿದ್ದಾರೆ; ಕೈಗೊಂಬೆಗಳಾಗಿರುವಂತಿದ್ದರೆ ಅಂತಹವರನ್ನು ಅವರು ಬೆಂಬಲಿಸುತ್ತಾರೆ ಕೂಡ. ಆದರೆ ತಮ್ಮದೇ ಸಮಾಜದಲ್ಲಿ ಮಹಿಳೆಯರು ಸ್ವತಂತ್ರವಾಗಿ ತಮ್ಮ ಆಶಯಗಳನ್ನು ರೂಪಿಸಿಕೊಳ್ಳಲು ಹೊರಟರೆ ಈ ಜನ ಅದನ್ನು ಸಹಿಸಲಾರರು.

ಹಿಂದುಳಿದ ವರ್ಗಗಳವರಿಗೆ ಹಾಗೂ ಅಲ್ಪಸಂಖ್ಯಾತರಿಗೆ ಪ್ರತ್ಯೇಕವಾದ ಸ್ಥಾನಗಳಿರಬೇಕೆಂದು ಒತ್ತಾಯಿಸಿ ಈ ಮಸೂದೆಯನ್ನು ವಿರೋಧಿಸುವವರಿಗೆ ಅದೊಂದು ನೆಪ, ಅಷ್ಟೆ. ಲಿಂಗ ಅಸಮಾನತೆಯ ನಿರ್ದಿಷ್ಟ ಸಮಸ್ಯೆಯನ್ನು ಕೇಂದ್ರೀಕರಿಸಿ ಹೋರಾಟ ನಡೆಯುತ್ತಿರುವಾಗ ಅದರಿಂದ ವಿಮುಖರನ್ನಾಗಿಸುವ ದುರುದ್ದೇಶ ಇದರಲ್ಲಿದೆ. ಆದ್ದರಿಂದಲೇ ಜಾತಿ ಮತ್ತು ಮತಧರ್ಮೀಯ ಪಕ್ಷಪಾತಗಳು ಸಾಮಾನ್ಯವಾಗಿ ಎಲ್ಲರಿಗೂ ಅನ್ವಯವಾಗುವಂತಿರುವಾಗ ಕೇವಲ ಮಹಿಳೆಯರಿಗೆ ಮಾತ್ರ ಅದರ ಪೆಟ್ಟು ಬೀಳುತ್ತದೆಂಬಂತೆ ಚಿತ್ರಿಸಲಾಗುತ್ತಿದೆ. ಪುರುಷ ಪ್ರಧಾನವಾಗಿರುವ ನಮ್ಮ ಇಂದಿನ ಸಮಾಜದಲ್ಲಿ ಮರ್ದನಕ್ಕೆ ಸಿಲುಕಿರುವ ಮಹಿಳೆಯರನ್ನು ಇಡಿಯಾಗಿ ಪರಿಗಣಿಸಿ ಅವರ ಹಕ್ಕುಗಳಿಗೆ ಮಾನ್ಯತೆ ನೀಡಬೇಕಾದ್ದು ಪ್ರಸ್ತುತ ಸನ್ನಿವೇಶದ ಜರೂರು ಅಗತ್ಯ. ಮಹಿಳಾ ಮೀಸಲಾತಿಗೆ ಮೊದಲು ಕಾರ್ಯತಃ ಮನ್ನಣೆ ದೊರೆತರೆ ಆಮೇಲೆ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ವರ್ಗಗಳ ಶೇಕಡಾವಾರು ಸ್ಥಾನಗಳು ದಕ್ಕಲು ಸಾಧ್ಯ. ಈಗ ಪ್ರಚಲಿತವಾಗಿರುವ ಸಾಮಾಜಿಕ-ರಾಜಕೀಯ ಶಕ್ತಿಗಳ ಹೊಂದಾಣಿಕೆಯು ಅದನ್ನು ಆಗುಮಾಡಲು ಸಮರ್ಥವಾಗಿವೆ.

ನಮ್ಮ ದೇಶದ ಇಡೀ ಮಹಿಳಾ ಚಳುವಳಿಗೆ ಇದೊಂದು ದೊಡ್ಡ ಜವಾಬ್ದಾರಿ ಹಾಗೂ ಸವಾಲಾಗಿದೆ. ಈ ಮಸೂದೆಯು ಶೀಘ್ರವಾಗಿ ಅಂಗೀಕೃತವಾಗುವಂತೆ ಮಾಡಲು ಐಕ್ಯ ಹೋರಾಟವನ್ನು ಅಣಿಗೊಳಿಸಬೇಕು.

**-ಕೆ. ಗಾಂಧಿಮತಿ (ಎ.ಹಿ.ಡಬ್ಲ್ಯೂ.ಎ.)**

## 2. ಮಹಿಳೆಗೆ ಮೀಸಲಾತಿ ಏಕೆ ಬೇಕು ?

ಕಳೆದ ಸಂಸತ್ ಅಧಿವೇಶನದಲ್ಲಿ ಮಹಿಳಾ ಮೀಸಲಾತಿ ಮಸೂದೆ ಪಾಸಾಗಲಿಲ್ಲ. ಈ ಕುರಿತ ಚರ್ಚೆಯನ್ನು ಅನಿರ್ದಿಷ್ಟ ಅವಧಿಯವರೆಗೆ ಮುಂದೂಡಲಾಯಿತು. ಇದರಿಂದಾಗಿ ದೇಶದ ಲೋಕಸಭಾ ಕ್ಷೇತ್ರಗಳಲ್ಲಿ ಮಹಿಳೆಯರಿಗೆ ಶೇಕಡಾ 33ರಷ್ಟು ಕ್ಷೇತ್ರಗಳನ್ನು ಮೀಸಲಾಗಿಡುವುದು ತಪ್ಪಿತು.

ಇದು ಮೇಲ್ನೋಟಕ್ಕೆ ವಾಸ್ತವ. ಆದರೆ ಅದರ ಆಳದಲ್ಲಿ ಸಾಮಾಜಿಕ ಇತಿಹಾಸವಿದೆ, ಜಾತಿಗಳಿವೆ, ವರ್ಗಗಳಿವೆ, ಧರ್ಮಗಳಿವೆ, ಪುರುಷ ಪ್ರಧಾನ ಸಮಾಜವಿದೆ, ಸ್ತ್ರೀಸಮೂಹದ ಆಶಯಗಳಿವೆ. ಶೇಕಡಾ 49ರಷ್ಟು ಮಹಿಳೆಯರು ಶೇಕಡಾ 51ರಷ್ಟು ಪುರುಷರ ಮುಂದೆ ಸೋತ ಕಥೆ ಇದೆ. ಮಹಿಳೆಯರಿಗೆ ಮೀಸಲಾತಿ ಸಿಗಲೇಬೇಕು ಎನ್ನುವ ಪುರುಷರಿದ್ದಾರೆ. ಮಹಿಳಾ ಮೀಸಲಾತಿ ಮಸೂದೆಯನ್ನು ವಿರೋಧಿಸುವ ಮಹಿಳೆಯರಿದ್ದಾರೆ! ಎಲ್ಲ ಜಾತಿಗಳಲ್ಲಿ, ಎಲ್ಲ ಪಕ್ಷಗಳಲ್ಲಿ, ಎಲ್ಲ ವರ್ಗಗಳಲ್ಲಿ ಮಸೂದೆ ಪರ ಮತ್ತು ವಿರೋಧಿ ಧ್ವನಿಗಳಿವೆ. ಸ್ವತಂತ್ರ ಭಾರತದ ಇತಿಹಾಸದಲ್ಲಿ ಭಾರತೀಯ ಸಮಾಜದ ನಿಜ ಸ್ವರೂಪವನ್ನು

## ಸಂವಾದ

ಇಷ್ಟು ಸ್ಪಷ್ಟವಾಗಿ ಎತ್ತಿ ತೋರಿಸಿದ ಘಟನೆ ಇನ್ನೊಂದಿಲ್ಲ. ಈ ಘಟನೆಯಿಂದ ಹೆಂಗಸರಿಗಿಂತ ಗಂಡಸರು ಪಾಠ ಕಲಿಯಬೇಕಾದ ಅವಶ್ಯಕತೆ ಹೆಚ್ಚಿದೆ.

ಮಹಿಳೆಯರು ರಾಜಕೀಯದಲ್ಲಿ ಮೀಸಲಾತಿಯನ್ನು ಏಕೆ ಬಯಸುತ್ತಿದ್ದಾರೆ ಎಂಬುದರ ಬಗ್ಗೆ ಗಂಡಸರು ಗಾಢವಾದ ಚಿಂತನೆ ಮಾಡಬೇಕಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಹಿಡಿತ ಸಾಧಿಸುವುದಕ್ಕಾಗಿ ಗಂಡಸರು ರಾಜಕೀಯದಲ್ಲಿ ಮುಂದೆ ಬರಲಿಚ್ಛಿಸಿದರೆ, ಸಾಮಾಜಿಕ ಅಸಮಾನತೆಯ ವಿರುದ್ಧ ಧ್ವನಿ ಎತ್ತುವ ಆಕಾಂಕ್ಷೆಯಿಂದ ಮಹಿಳೆಯರು ರಾಜಕೀಯ ಕ್ಷೇತ್ರವನ್ನು ಆಯ್ಕೆ ಮಾಡಬಯಸುತ್ತಾರೆ. ಈ ಒಂದು ವಿಶಾಲ ತರ್ಕದ ಹಿನ್ನೆಲೆಯಲ್ಲಿ ಮಹಿಳಾ ಮೀಸಲಾತಿಯ ಪರ- ವಿರೋಧಿ ನಿಲುವುಗಳ ಬಗ್ಗೆ ವಿಶ್ಲೇಷಿಸುವುದು ಅವಶ್ಯವಾಗಿದೆ. ಆ ಮೂಲಕ ಇತರೆ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಆತಂಕವನ್ನು ಅರಿಕೊಂಡೂ ಮಸೂದೆ ಪರವಾಗಿ ನಿಲ್ಲುವುದು ಅನಿವಾರ್ಯವಾಗಿದೆ.

1998ನೇ ಆಗಸ್ಟ್ ತಿಂಗಳ ಮೊದಲ ವಾರದ ಸುದ್ದಿಗಳನ್ನೂ ಮತ್ತೊಮ್ಮೆ ಓದಿರಿ. ಅವುಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಕೆಲ ವಿಶಿಷ್ಟ ಸುದ್ದಿಗಳು ಸಿಗುವವು. ಬೆಂಗಳೂರಿನ ಒಬ್ಬ ವ್ಯಕ್ತಿ ತನ್ನ ಬಾಡಿಗೆ ಬಂಟರನ್ನು ಕರೆಸಿ ತನ್ನ ಮಗಳನ್ನೇ ಕೊಂದ ಸುದ್ದಿ ಎಲ್ಲಿಯೂ ಚರ್ಚೆಯಾಗದೆ ಹೋಯಿತು. ಕೊಲೆಗೆ ಕಾರಣವಿಷ್ಟೇ. ಆಕೆ ಒಬ್ಬ ಯುವಕನನ್ನು ಪ್ರೀತಿಸಿದ್ದಳು. ಇದೆಲ್ಲ ಗೊತ್ತಿದ್ದೂ ತಂದೆಯಾದವನು ಬೇರೆ ಕಡೆ ಒತ್ತಾಯದಿಂದ ಆಕೆಯ ಮದುವೆ ಮಾಡಿದ. ಗಂಡನ ಮನೆಯಿಂದ ತವರು ಮನೆಗೆ ಬಂದ ಆಕೆ ತನ್ನ ಪ್ರಿಯಕರನ ಬಳಿ ಹೋದಳು. ತಂದೆ ಆಕೆಯ ಕೊಲೆ ಮಾಡಲು ಈ 'ಅಪರಾಧ' ಕಾರಣವಾಯಿತು. ಗಂಡಸು ಸೃಷ್ಟಿಸಿದ ಮೌಲ್ಯಗಳುಳ್ಳ ಸಮಾಜದಲ್ಲಿ ಹೆಂಗಸಿಗೆ ಆಯ್ಕೆಯ ಸ್ವಾತಂತ್ರ್ಯವೇ ಇಲ್ಲ ಎಂಬುದನ್ನು ಜನ ಸಮುದಾಯ ಗುರುತಿಸುತ್ತಲೇ ಇಲ್ಲ.

ದೆಹಲಿಯ ಒಂದು ಸುದ್ದಿ ಹೀಗೆ ಇತ್ತು. ಗಂಡನ ಕಾಟ ತಾಳದೆ ಹೆಂಡತಿ, ತನ್ನ ಇಬ್ಬರು ಮಕ್ಕಳ ಜೊತೆ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದಳು. ಮಕ್ಕಳು ಸತ್ತರು; ಆ ಮಹಿಳೆ ಬದುಕುಳಿದಳು. ನ್ಯಾಯಾಲಯ ಆಕೆಗೆ ಕೊಲೆ ಮತ್ತು ಆತ್ಮಹತ್ಯೆಯ ಆರೋಪದ ಮೇಲೆ ಶಿಕ್ಷೆ ವಿಧಿಸಿತು. ನಾಲಾಯಕ್ ಗಂಡ ಎಂದಿನಂತೆ ಉಳಿದ. ತನ್ನ ಪಾಲಿಗೆ ಇದ್ದೂ ಸತ್ತಂತಹ ಗಂಡನಿಂದ ಹತಾಶಳಾದ ಮಹಿಳೆಗೆ ಆತ್ಮಹತ್ಯೆಯೊಂದೇ ಸಮಸ್ಯೆಯಿಂದ ಪಾರಾಗುವ ಮಾರ್ಗವಾಗಿದೆ! ಆ ಸಂದರ್ಭದಲ್ಲಿ ಮಕ್ಕಳನ್ನು ತಬ್ಬಲಿ ಮಾಡಬಾರದೆಂಬ ಒಂದೇ ಕಾರಣದಿಂದ ಮಕ್ಕಳ ಜೊತೆಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈ ಹೃದಯ ವಿದ್ರಾವಕ ದುರಂತಗಳು ಪುರುಷ ಪ್ರಧಾನ ಸಮಾಜ, ರಾಜಕೀಯ ಮತ್ತು ನ್ಯಾಯಾಂಗಗಳ ಕಣ್ಣಿಗೆ ಬೀಳುವುದಿಲ್ಲವೆ ? ಶೇಕಡಾ 33ರಷ್ಟು ಮೀಸಲಾತಿ ಬಯಸುವ ಮನಸ್ಸುಗಳಲ್ಲಿ ಇಂಥ ಪ್ರಶ್ನೆಗಳಿವೆ, ಕಳಕಳಿಗಳಿವೆ.

ಲಾಲೂಪ್ರಸಾದ್ ಯಾದವ್, ಶರದ್ ಯಾದವ್, ಕಾಂಶಿ ರಾಮ್, ಮುಲಾಯಂಸಿಂಗ್ ಯಾದವ್, ಉಮಾಭಾರತಿ, ಜಾಫರ್ ಷರೀಫ್ ಮುಂತಾದವರು ಈ ಕಡೆ ಗಮನ ಹರಿಸುವುದು ಅವಶ್ಯವಾಗಿದೆ. ಇತರೆ ಹಿಂದುಳಿದ ವರ್ಗಗಳಿಗೆ ಮತ್ತು ಅಲ್ಪ ಸಂಖ್ಯಾತರಿಗೆ ಇದರಿಂದ ಅನ್ಯಾಯವಾಗುತ್ತದೆ ಎಂಬುದು ಅವರವರ ಅನುಭವಗಳ ಮತ್ತು ಭಾರತೀಯ ಸಮಾಜದ ವಾಸ್ತವತೆಯ ಹಿನ್ನೆಲೆಯಲ್ಲಿ ಅವರ ವಾದವಾಗಿದೆ.

ಕೆಳಜಾತಿ, ಕೆಳವರ್ಗ ಮತ್ತು ಅಲ್ಪಸಂಖ್ಯಾತರಲ್ಲಿ ಮಹಿಳೆಯರು ರಾಜಕೀಯವಾಗಿ ಮುಂದೆ ಬಂದಿಲ್ಲ. ಶೇಕಡಾ 33 ಮಹಿಳಾ ಮೀಸಲಾತಿ ಕ್ಷೇತ್ರಗಳಲ್ಲಿ ಬಹುಪಾಲು ಕ್ಷೇತ್ರಗಳು ಮುಂದುವರಿದ ಜಾತಿಗಳ ಮಹಿಳೆಯರ ಪಾಲಾಗುತ್ತವೆ. ಇದರಿಂದ ಅಲ್ಪಸಂಖ್ಯಾತರ ಮತ್ತು ಹಿಂದುಳಿದ ವರ್ಗಗಳ ರಾಜಕೀಯ ಬೆಳವಣಿಗೆ ಕುಂಠಿತಗೊಳ್ಳುತ್ತದೆ. ಅವರ ಪ್ರಾತಿನಿಧ್ಯ ಲೋಕಸಭೆಯಲ್ಲಿ ಕಡಿಮೆಯಾಗುತ್ತದೆ. ಒಟ್ಟಾರೆ ಸಾಮಾಜಿಕ ನ್ಯಾಯಕ್ಕೆ ಕೊಡಲಿ ಪೆಟ್ಟು ಬೀಳುತ್ತದೆ. ಈ ಸಮಸ್ಯೆ ಬಗೆಹರಿಸಿ ಮಹಿಳೆಯರಿಗೆ ಮೀಸಲಾತಿ ನೀಡಲಿ. ಶೇಕಡಾ 33ರಷ್ಟು ಮಹಿಳಾ ಮೀಸಲಾತಿಯಲ್ಲಿ ಹಿಂದುಳಿದ ಮತ್ತು ಅಲ್ಪಸಂಖ್ಯಾತ ಮಹಿಳೆಯರಿಗೆ ಅವರ ಪಾಲು ಕೊಡುವುದರ ಮೂಲಕ ಮಾತ್ರ ಸರ್ವಸಮ್ಮತವಾದ ಮಹಿಳಾ ಮೀಸಲಾತಿ ಮಸೂದೆಯನ್ನು ಪಾಸು ಮಾಡಲು ಸಾಧ್ಯ ಎಂಬುದು ಅವರ ಅಂಬೋಣವಾಗಿದೆ. ಮಹಿಳೆಯರು ಒಂದು ಜಾತಿ ಅಲ್ಲ, ಒಂದು ವರ್ಗವೂ ಅಲ್ಲ ಎಂಬುದು ಒಪ್ಪಿಕೊಳ್ಳಲೇಬೇಕಾಗುತ್ತದೆ. ಆ ಹಿನ್ನೆಲೆಯಲ್ಲಿ ಇವರು ಎತ್ತಿದ ಪ್ರಶ್ನೆಯ ಬಗ್ಗೆ ಗಂಭೀರವಾಗಿ ಆಲೋಚನೆ ಮಾಡಲೇಬೇಕಾಗುತ್ತದೆ. ಆದರೆ ಈ ಬೇಡಿಕೆಯ ಹಿಂದೆ ಹಿಂದುಳಿದ ಮತ್ತು ಅಲ್ಪಸಂಖ್ಯಾತ ಮಹಿಳೆಯರ ಬಗ್ಗೆ ನಿಜವಾದ ಕಳಕಳಿ ಇದೆಯೆ?

ಎಲ್ಲ ಜಾತಿಗಳು, ಎಲ್ಲ ವರ್ಗಗಳು ಮತ್ತು ಎಲ್ಲ ಧರ್ಮಗಳ ಸಮಾಜಗಳು ವಾಸ್ತವದಲ್ಲಿ ಪುರುಷ ಪ್ರಧಾನವೇ ಆಗಿವೆ. ಆದ್ದರಿಂದ ಹೀಗೆ ಹಂಚಿಹೋದ ಮಹಿಳೆಯರ ಬದುಕಿನಲ್ಲಿ ಪುರುಷ ಪ್ರಧಾನ ಸಮಾಜದ ಅನಿಷ್ಟಗಳ ದುಷ್ಪರಿಣಾಮಗಳು ತಾಂಡವವಾಡುತ್ತಿವೆ. ಅಂತೆಯೇ ನಾವು ಮಹಿಳಾ ಮೀಸಲಾತಿಯನ್ನು ಬೆಂಬಲಿಸಿ ಗೆಲುವು ಸಾಧಿಸಬೇಕಾಗಿದೆ. ನಂತರ ಹಿಂದುಳಿದ ಮತ್ತು ಅಲ್ಪಸಂಖ್ಯಾತ ಮಹಿಳೆಯರ ಮೀಸಲಾತಿ ಸ್ಥಾನಗಳಿಗಾಗಿ ಹೋರಾಡಬೇಕಿದೆ.

ಒಂದು ವಿಪರ್ಯಾಸವೆಂದರೆ ಮಹಿಳಾ ಮೀಸಲಾತಿ ಪರ ಮತ್ತು ವಿರೋಧ ಪಕ್ಷಗಳು ಕೊನೆಗೂ ಮಾಡಿದ್ದೇನು ? ಮಸೂದೆ ಕುರಿತ ಚರ್ಚೆಯನ್ನೂ ಮುಂದಕ್ಕೆ ಹಾಕಿದ್ದು! ಆದರೆ ಎಂದಿನಂತೆ ಎಡಪಕ್ಷಗಳು ಪ್ರಾಮಾಣಿಕ ನಿಲುವನ್ನು ತಾಳಿದ್ದು ಸಮಾಧಾನಕರ ಸಂಗತಿ.

- ರಂಜಾನ್‌ದರ್ಗಾ

## ಮೀಸಲಾತಿ ಸಾಂಕೇತಿಕವಾಗಬಾರದು

ಮಹಿಳಾ ಮೀಸಲು ಮಸೂದೆ ಅಥವಾ ಸಂವಿಧಾನದ 84ನೇ ತಿದ್ದುಪಡಿ ಮತ್ತೊಮ್ಮೆ ನೆನೆಗುದಿಗೆ ಬಿದ್ದಿದೆ. ಕಳೆದ ಮೂರು ವರ್ಷಗಳಿಂದ 1996ರ ದೇವೇಗೌಡರ ಸರ್ಕಾರ, ನಂತರ ಗುಜ್ರಾಲ್ ಹಾಗೂ ಈಗಿನ ಅಟಲ್ ಬಿಹಾರಿ ವಾಜಪೇಯಿ ಸರ್ಕಾದವರೆಗೆ ಎಲ್ಲಾ ಸರ್ಕಾರಗಳಲ್ಲೂ, ಲೋಕಸಭೆ ಹಾಗೂ ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಶೇಕಡಾ 33 ಸ್ಥಾನ ಮೀಸಲಿರಿಸುವ ಉದ್ದೇಶದ ಈ ಮಸೂದೆ ಮಂಡನೆಯ ಸಂದರ್ಭಗಳೇ ಕೋಲಾಹಲಕಾರಿಯಾಗಿ ಪಿತೃಪ್ರಧಾನ ರಾಜಕೀಯ ವ್ಯವಸ್ಥೆಯ ಅಸಹನೆ ವ್ಯಕ್ತವಾಗುತ್ತಲೇ ಇದೆ.

ಆದರೂ ರಾಷ್ಟ್ರ ರಾಜಕಾರಣದಲ್ಲಿ, ಉನ್ನತ ಶಾಸನಸಭೆಗಳಲ್ಲಿ ಮಹಿಳಾ ಪ್ರಾತಿನಿಧ್ಯದ ಕೊರತೆಯ ಬಗ್ಗೆ ಎಲ್ಲಾ ರಾಜಕೀಯ ಪಕ್ಷಗಳೂ ಈವರೆಗೆ ಮೊಸಳೆ ಕಣ್ಣೀರನ್ನೂ ಸುರಿಸುತ್ತಲೇ ಬಂದಿವೆ. ಮಹಿಳಾ ಮೀಸಲು ಮಸೂದೆಯ ಒಟ್ಟಾರೆ ಸಾಮಾಜಿಕ ಪರಿಣಾಮ ತಕ್ಷಣಕ್ಕೆ ಗೊತ್ತಾಗದಿದ್ದರೂ ಭಾರತದ ಚುನಾವಣಾ ರಾಜಕಾರಣದಲ್ಲಿ ಹೊಸದೊಂದು ಸಮೀಕರಣಗಳ ಸೃಷ್ಟಿಗೆ ಕಾರಣವಾಗಬಹುದಾದ ಈ ಮಸೂದೆಯ ಗುಣಾವಗುಣಗಳ ಬಗ್ಗೆ ಗಂಭೀರವಾದ, ವಿಚಾರಪೂರ್ಣ ಚರ್ಚೆಯೂ ನಡೆಯದೆ, ಕೇವಲ ಭಾವಾವೇಶದ, ಆಕ್ರಮಣಕಾರಿ ಪ್ರತಿಭಟನೆಗಳಿಗೆ ನಾಂದಿಯಾಗುತ್ತಿರುವುದು ನಮ್ಮ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಲಿಂಗ ಅಸಮಾನತೆಯ ಸಂಸ್ಕೃತಿಯ ಪ್ರತಿಬಿಂಬವೇ ಆಗಿದೆ; ಮಹಿಳಾ ಮೀಸಲಿನ ಬಗ್ಗೆ ಪ್ರಸ್ತುತ ವ್ಯವಸ್ಥೆಯ ರಾಜಕಾರಣಿಗಳಲ್ಲಿರುವ ಭೀತಿ, ಅಭದ್ರತೆ, ನಿಜವಾದ ಚಿಂತನಗಳೂ, ಆಷಾಢಭೂತಿ ಧೋರಣೆಗಳೂ ಬಯಲಾಗುತ್ತಿವೆ. ಆರಂಭದಲ್ಲಿ 1996ರ ಸಪ್ಟೆಂಬರ್ 12ರಂದು ಸಂಸತ್ತಿನಲ್ಲಿ ಮಹಿಳಾ ಮೀಸಲು ಮಸೂದೆ ಮಂಡನೆಗೆ ಯತ್ನಿಸಿದಾಗ ಮಹಿಳಾ ಮೀಸಲಾತಿಯೊಳಗೇ ಇತರ ಹಿಂದುಳಿದ ವರ್ಗಗಳಿಗೂ (ಓಬಿಸಿ) ಪ್ರತ್ಯೇಕ ಕೋಟಾ ಒದಗಿಸಬೇಕೆಂಬ ಆಗ್ರಹ ಕೇಳಿಬಂತು. ನಂತರ ಇದನ್ನು ಸಿಪಿಐ ಸದಸ್ಯೆ ಗೀತಾ ಮುಖರ್ಜಿ ನೇತೃತ್ವದ ಜಂಟಿ ಪರಿಶೀಲನಾ ಸಮಿತಿ ಪರಿಶೀಲನೆಗೆ ಒಪ್ಪಿಸಲಾಯಿತು. ಈ ಸಮಿತಿ 1996ರ ಡಿಸೆಂಬರ್ 9ರಂದು ತನ್ನ ಅಂತಿಮ ವರದಿ ಸಲ್ಲಿಸಿ 'ಮೀಸಲಾತಿಯೊಳಗೆ ಜಾತಿ ಆಧಾರಿತ ಮೀಸಲು' ಒದಗಿಸುವ ಬೇಡಿಕೆಯನ್ನು ತಿರಸ್ಕರಿಸಿತು. ಇದು ಮಂಡಲ್‌ವಾದಿಗಳ ಆಕ್ರೋಶಕ್ಕೆ ಎಡೆಮಾಡಿತು. ನಂತರ ಪ್ರಧಾನಿ ಎಚ್.ಡಿ. ದೇವೇಗೌಡರ ಅಧಿಕಾರಾವಧಿಯಲ್ಲದೆ ಪ್ರಧಾನಿ ಐ.ಕೆ. ಗುಜ್ರಾಲ್ ಅವರ ಅಧಿಕಾರಾವಧಿಯಲ್ಲಿಯೂ ಈ ಮಸೂದೆ ಚರ್ಚೆಗೊಳಪಟ್ಟು ಕೋಲಾಹಲ ಸೃಷ್ಟಿಸಿದ್ದು ಹಳೆಯ ಕತೆ.

ಕಳೆದ ತಿಂಗಳೂ ಮತ್ತೆ ಸಂಸತ್ತಿನಲ್ಲಿ ಇದೇ ಕೋಲಾಹಲದ ಕತೆ ಪುನರಾವರ್ತನೆಯಾಗಿ ಸಂಸದೀಯ ಪ್ರಜಾಸತ್ತೆಯನ್ನೇ ಅಣಕಿಸುವಂತಹ ರೀತಿಯ ವ್ಯವಸ್ಥಿತ ಪ್ರತಿಭಟನೆಗೆ ಒಳಪಟ್ಟಿತು. ಮಸೂದೆ ಮಂಡನೆಗೆ ಯತ್ನಿಸಿದ ಕಾನೂನು ಸಚಿವರ ಕೈಯಿಂದಲೇ ಮಸೂದೆಯ ಪ್ರತಿಯನ್ನು ರಾಷ್ಟ್ರೀಯ ಜನತಾದಳದ ಸದಸ್ಯರೊಬ್ಬರು ಕಿತ್ತುಕೊಂಡು ಎಸೆದಾಡಿದ್ದು, ಸಂಸದೀಯ ವ್ಯವಸ್ಥೆಯ ವಿಸ್ತೃತ ಹಿತಾಸಕ್ತಿಗಳಿಗೆ ಧಕ್ಕೆ ತರುವಂತಹದ್ದಾಗಿತ್ತು. ಹಿರಿಯ ರಾಜಕಾರಣಿಗಳಾದ ಲಾಲೂ ಪ್ರಸಾದ್ ಯಾದವ್ - ಮುಲಾಯಂ ಸಿಂಗ್ ಯಾದವ್ ದ್ವಯರು ಸಾಮಾಜಿಕ ನ್ಯಾಯದ ಪ್ರಶ್ನೆ ಎತ್ತಿ ಮಹಿಳಾ ಮೀಸಲಾತಿಯೊಳಗೆ ಓಬಿಸಿ ಮತ್ತು ಮುಸ್ಲಿಮರಿಗೂ ಪ್ರತ್ಯೇಕ ಕೋಟಾ ಮೀಸಲಿಡಬೇಕೆಂಬ ವಾದವನ್ನು ತಾರಕಕ್ಕೇರಿಸಿದರು. ಕಳೆದ ವರ್ಷವಷ್ಟೇ ಜನತಾದಳದ ಶರದ್ ಯಾದವ್ ಅವರು ಈ ಮಸೂದೆಯ ನಿಜವಾದ ಫಲಾನುಭವಿಗಳು 'ಬಾಲ್ ಕಟೀ ಮಹಿಳಾ' ('ತುಂಡುಗೂದಲಿನ ಮಹಿಳೆಯರು') ಎಂದು ವಿವಾದ ಸೃಷ್ಟಿಸಿದ್ದರು. ರಾಜೀವರ ಕನಸಿನ ಮಸೂದೆ ಇದೆಂದು ಮಹಿಳಾ ಮಸೂದೆಗೆ ಈಗಿರುವ ರೂಪದಲ್ಲೇ ಕಾಂಗ್ರೆಸ್‌ನ ಪೂರ್ಣ ಬೆಂಬಲ ಘೋಷಿಸಿದ್ದ ಸೋನಿಯಾ ಗಾಂಧಿ, ನಂತರ ಓಬಿಸಿ - ಮುಸ್ಲಿಮರ ಮೀಸಲಿನ ಪ್ರಶ್ನೆ ಹಿನ್ನೆಲೆಯಲ್ಲಿ ಪಕ್ಷದೊಳಗೇ ಉಂಟಾದ ಬಂಡಾಯದ ಹಿನ್ನೆಲೆಯಲ್ಲಿ ಮಸೂದೆ ಪರ ಪೂರ್ಣ ಬೆಂಬಲದಿಂದ ಹಿಂದೆ ಸರಿಯಬೇಕಾಯಿತು. ಆಡಳಿತಾರೂಢ ಬಿಜೆಪಿಯಲ್ಲೂ ಓಬಿಸಿ ಪರ ಧೋರಣೆಗಳಿಂದ ಈಗಿರುವ ರೂಪದ ಮಹಿಳಾ ಮಸೂದೆಗೆ ವಿರೋಧದ ದನಿಗಳು ಇದ್ದೇ ಇದೆ. (ಉಮಾಭಾರತಿ, ಕಲ್ಯಾಣ್‌ಸಿಂಗ್). ಈ ಹಿನ್ನೆಲೆಯಲ್ಲಿ ಈಗ ಮಸೂದೆಯ ಪರ ಎಡಪಕ್ಷಗಳದ್ದು ಮಾತ್ರ ಒಂಟಿ ದನಿಯಾಗಿದೆ. ಶಾಸನಬದ್ಧ ರಾಜಕೀಯ ಅಧಿಕಾರ ಈಗಿರುವ ಅಸಮಾನತೆಯ ಸಾಮಾಜಿಕ ಸಂಬಂಧಗಳ ರೀತಿಯನ್ನು ಬದಲಿಸಬಲ್ಲುದೆ ಎಂಬ ಪ್ರಶ್ನೆಗಳನ್ನು ಸ್ತ್ರೀವಾದಿಗಳೂ ಕೇಳುತ್ತಿದ್ದಾರೆ. ಮೀಸಲಾತಿಯಿಂದ 'ಬೀವಿ, ಬೇಟಿ ಬ್ರಿಗೇಡ್' ಅರ್ಥಾತ್ ಪುರುಷ ರಾಜಕಾರಣಿಗಳ ಪತ್ನಿ, ಪುತ್ರಿಯರಿಗೇ ಅಧಿಕಾರ ಹಂಚಿಕೆಗೆ ಅನುಕೂಲ ಸೃಷ್ಟಿಯಾಗಿರುವುದು ಕೆಲವು ಸಂದರ್ಭಗಳಲ್ಲಿ ನಿಜವಾಗಿರುವುದೂ ಇದೆ ಎಂದು ಒಂದು ವರ್ಗ ವಾದಿಸಿದರೆ, ಈ ಬಗೆಯ ಸ್ವಜನಪಕ್ಷಪಾತದ ಉದಾಹರಣೆಗಳು ಈಗಿನ ಸಾಮಾಜಿಕ ವ್ಯವಸ್ಥೆಯ ಫಲ. ಪುರುಷರೂ ಈ ಬಗೆಯ ಸ್ವಜನಪಕ್ಷಪಾತದ ಫಲಾನುಭವಿಗಳಾಗಿ ಅಧಿಕಾರದ ಮೆಟ್ಟಿಲೇರಿರುವ ಉದಾಹರಣೆಗಳು ಅಸಂಖ್ಯ. ಈ ಸಂದರ್ಭದಲ್ಲಿ 'ಬೀವಿ, ಬೇಟಿ ಬ್ರಿಗೇಡ್...'ವಾದ ಪೊಳ್ಳಾದುದು ಎಂದು ವಾದಿಸುವವರೂ ಇದ್ದಾರೆ.

## ಸಂವಾದ

ಸಾಮಾನ್ಯವಾಗಿ ಮಹಿಳಾ ರಾಜಕಾರಣಿಗಳಿಗೆ ಮಹಿಳಾ ಚಳುವಳಿಗಳ ಜೊತೆಗೆ ಸಾವಯುವ ಸಂಬಂಧ ಇರುವುದು ಕಡಿಮೆ. ಹೀಗಾಗಿ 'ಮಹಿಳಾ ಪ್ರಶ್ನೆ'ಗಳ ಬಗ್ಗೆ ಪರ್ಯಾಯ ದೃಷ್ಟಿಯನ್ನು ಹೊಂದಿರದ ಮಹಿಳಾ ರಾಜಕಾರಣಿಗಳು ಪುರುಷ ರಾಜಕಾರಣಿಗಳಂತೆಯೇ ಪಿತೃಪ್ರಧಾನ ಮೌಲ್ಯಗಳ ದೃಷ್ಟಿಯನ್ನೇ ಹೊಂದಿರುತ್ತಾರೆ. ಮಹಿಳಾ ಮೀಸಲಿನಿಂದ ರಾಜಕೀಯದಲ್ಲಿ ಮಹಿಳೆಯರ ಪರಿಣಾಮಕಾರಿ ಪಾಲ್ಗೊಳ್ಳುವಿಕೆ ಸಾಧ್ಯವಾಗುತ್ತದೆ ಎಂದು ಹೇಳುವುದು ಅಸಾಧ್ಯ. ಇದು 'ಸರ್ಕಾರ ಪ್ರಾಯೋಜಿತ ಸ್ತ್ರೀವಾದ'ಕ್ಕೆ ನಾಂದಿಯಾಗಬಹುದು; ಬರೀ ಸಾಂಕೇತಿಕತೆಯಲ್ಲಿ ತನ್ನ ಸಾರ್ಥಕತೆಯನ್ನು ಇದು ಕಂಡುಕೊಳ್ಳಬಹುದು ಎಂದೂ ಕೆಲವು ಸ್ತ್ರೀವಾದಿಗಳು ಅಭಿಪ್ರಾಯಪಟ್ಟಿದ್ದಾರೆ. ವಿಸ್ತೃತವಾದ ಚುನಾವಣಾ ಸುಧಾರಣೆಗಳಾಗದೆ ಮಹಿಳಾ ಮೀಸಲು ಹೆಚ್ಚಿನ ಅರ್ಥವಂತಿಕೆ ಪಡೆದುಕೊಳ್ಳುವುದು ಸಾಧ್ಯವಿಲ್ಲ ಎಂದೂ ಕೆಲವು ಸ್ತ್ರೀವಾದಿಗಳು ಅಭಿಪ್ರಾಯಪಡುತ್ತಾರೆ.

ಆದರೆ 'ಮಹಿಳಾ ಮೀಸಲಿನಿಂದ ಉತ್ತಮ ಆಡಳಿತ ದೊರೆಯುವ ಸಾಧ್ಯತೆ ಇದೆ' ಎಂದೂ ಇನ್ನೂ ಕೆಲವರು ಅಭಿಪ್ರಾಯ ಪಡುತ್ತಾರೆ. ಪಂಚಾಯಿತಿ ಮತ್ತು ಜಿಲ್ಲಾ ಪರಿಷತ್ತುಗಳಲ್ಲಿ ಸ್ಥಾನ ಮೀಸಲಿನ ನಂತರ ಲೋಕಸಭೆ ಹಾಗೂ ರಾಜ್ಯ ಶಾಸನಸಭೆಗಳಲ್ಲಿ ಮೀಸಲಾತಿ ನೀಡಿಕೆ ತರ್ಕಬದ್ಧವಾದ ಬೆಳವಣಿಗೆಯೇ ಆಗಿದೆ. ''ನೀತಿ ನಿರೂಪಕ ಪ್ರಕ್ರಿಯೆಯಲ್ಲಿ ಮಹಿಳೆಯರ ಹೆಚ್ಚಿನ ಪಾಲುದಾರಿಕೆ ಆಡಳಿತಕ್ಕೆ ಹೊಸ ಸ್ಪರ್ಶ ನೀಡುವ ಸಾಧ್ಯತೆ ಇದೆ. ಆಡಳಿತಕ್ಕೆ ಮಹಿಳಾ ದೃಷ್ಟಿಯನ್ನೂ ಸೇರಿಸುವ ಮೂಲಕ ಆಡಳಿತವನ್ನು ಹೆಚ್ಚು ಮಾನವೀಯಗೊಳಿಸಲು ಅಪಾರ ಅವಕಾಶಗಳಿವೆ'' ಎಂದೂ ಅನೇಕರು ವಾದಿಸುತ್ತಾರೆ. ತಾವು ಸ್ಪರ್ಧಾತ್ಮಕವಾಗಿರಬಲ್ಲವೆಂಬುದನ್ನು ಮಹಿಳೆಯರು ಈವರೆಗಿನ ಚುನಾವಣಾ ರಾಜಕಾರಣದಲ್ಲಂತೂ ಸಾಬೀತು ಮಾಡಿದ್ದಾರೆ. ಅಂಕಿ ಅಂಶಗಳ ಪ್ರಕಾರ, ಮಹಿಳೆಯರು ಸ್ಪರ್ಧಿಸಿರುವ ಸೀಟುಗಳ ಸಂಖ್ಯೆಗೆ ಅನುಗುಣವಾಗಿ ಅವರು ಗೆದ್ದಿರುವ ಸೀಟುಗಳ ಸಂಖ್ಯೆಯನ್ನು ಲೆಕ್ಕ ಹಾಕಿದಲ್ಲಿ ಮಹಿಳೆಯರ ಸ್ಪರ್ಧಾತ್ಮಕತೆ ಸಾಬೀತಾಗಿದೆ ಎಂದು ಅಧ್ಯಯನ ವರದಿಗಳು ತಿಳಿಸಿವೆ. ಪುರುಷ ಪ್ರಾಬಲ್ಯದ ವ್ಯವಸ್ಥೆಯಲ್ಲಿ ಮಹಿಳೆಯರು ತಮ್ಮ ಹಕ್ಕಿನ ಸ್ಥಾನಗಳಿಂದ ವಂಚಿತರಾಗಿರುವುದರಿಂದ ಮೀಸಲು ಅತ್ಯಗತ್ಯ ಎಂದೂ ಮಸೂದೆ ಪರವಾಗಿರುವವರು ವಾದಿಸುತ್ತಾರೆ.

ಸಾಂಪ್ರದಾಯಿಕತೆಯಿಂದ ಆಧುನಿಕತೆಯತ್ತ ಸಾಗುತ್ತಿರುವ ಸಮಾಜದ ಈಗಿನ ಸಂಕ್ರಮಣಾವಸ್ಥೆಯಲ್ಲಿ ಸಕಾರಾತ್ಮಕ ಕ್ರಿಯೆಗಳು ಅತ್ಯಗತ್ಯ. ಯೋಜನಾ ಪ್ರಕ್ರಿಯೆಯಲ್ಲಿ ಮಾನವ ಜನಾಂಗದ ಅರ್ಧದಷ್ಟಿರುವ ಮಹಿಳೆಯರನ್ನು ಕೈಬಿಡಲಾಗದು. ಈ ದಿಸೆಯಲ್ಲಿ ವ್ಯಕ್ತವಾಗುತ್ತಿರುವ ದ್ವಂದ್ವಗಳು, ರಾಜಕಾರಣಿಗಳ ಆಷಾಢಭೂತಿತನಗಳನ್ನು ಭೇದಿಸಿ 'ಮಹಿಳಾ ಮೀಸಲಾತಿ' ಕುರಿತಂತೆ ಸ್ಪಷ್ಟ ಸಾರ್ವಜನಿಕ ಅಭಿಪ್ರಾಯವನ್ನು ಭಾರತೀಯ ಸ್ತ್ರೀವಾದಿಗಳು ತುರ್ತಾಗಿ ರೂಪಿಸಬೇಕಿದೆ. ಈಗಿನ ಪ್ರಮುಖ ರಾಜಕೀಯ ಪರಿಭಾಷೆಯಾಗಿರುವ ಕುತಂತ್ರ, ಕೈವಾಡ, ಚುನಾವಣಾ ಲೆಕ್ಕಾಚಾರಗಳನ್ನು ಮೀರಿದಂತಹ ಕಾಳಜಿಪೂರ್ಣ ರಾಜಕೀಯ ವ್ಯವಸ್ಥೆಯ ಬೆಳವಣಿಗೆಗೆ ಮಹಿಳೆಯರ ರಾಜಕೀಯ ಪ್ರಾತಿನಿಧ್ಯ ದಾರಿ ಮಾಡಬಲ್ಲುದೆ ಎಂಬ ಸವಾಲನ್ನೂ ವಿವೇಚಿಸುವುದು ಇಂದಿನ ತುರ್ತು ಅಗತ್ಯವಾಗಿದೆ.

- ಸಿ.ಜಿ. ಮಂಜುಳಾ

*''ಮೀಸಲಾತಿ ಬೇಕು. ಆದರೆ ಶೇ. 33 ಅನ್ನುವುದು ಯಾವ ಲೆಕ್ಕ. ಪುರುಷರಿಗೆ ಯಾವುದರಲ್ಲಿ ಕಮ್ಮಿ, ಶೇ.50ನ್ನೇ ಕೇಳಬೇಕು.*

*ಆದರೆ ಸಂಸತ್ತಿಗೆ ಫೂಲನ್, ರಾಬ್ರಿಯಂಥವರು ಬರದಂತೆ ಎಚ್ಚರಿಕೆ ವಹಿಸಬೇಕು. ಮೀಸಲಾತಿಯ ಮುಸುಕಿನಲ್ಲಿ ಹೆಂಡತಿಯರ ಮೂಲಕ ರಾಜಕೀಯ ಲಾಭ ಪಡೆಯುವ ಗಂಡಂದಿರಿರುವ ಪ್ರಸಂಗ ಬರಬಾರದು.*

*ಸಂಸದರು ವಿದ್ಯೆ, ಬುದ್ಧಿ, ವಿನಯ ಉಳ್ಳವರಾಗಿರಬೇಕು. ಅವರವರ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದವರಾಗಿರಬೇಕು. ಈ ಮೀಸಲಾತಿಯೊಳಗೆ ಯಾವುದೇ ವಿಧವಾದ ಮೀಸಲಾತಿ ಖಂಡಿತ ಇರಬಾರದು. ಕೇವಲ ದಕ್ಷತೆಯೇ ಮಾನದಂಡವಾಗಿರಬೇಕು.''*

**- ಅಮೃತಾ ಜಿ.**

*''ಮೀಸಲಾತಿಯಿಂದ ಏನೂ ಉಪಯೋಗವಿಲ್ಲ. ಯಾರು ಬಂದರೆ ಏನು ? ತೀರಾ ಕೆಳಸ್ತರದ ಮಹಿಳೆಯ ಪಾಡು ಎಂದೆಂದೂ ಶೋಚನೀಯವಾಗಿಯೇ ಉಳಿಯುತ್ತದೆ. ಅಧಿಕಾರಕ್ಕೆ ಯಾರೇ ಬಂದರೂ, ಅವರ ಪಾಡು ಅವರಿಗೆ; ಇವರದ್ದು ಇವರಿಗೆ.''*

**- ಆಶಾ ರಮೇಶ್**

# ಮರುಕಳಿಸಿದ ಜಲಿಯನ್ ವಾಲಾಬಾಗ್

- ಎ. ಜ್ಯೋತಿ.

1919ರಲ್ಲಿ ಅಮೃತಸರದಲ್ಲಿ ಒಂದು ಘೋರ ಘಟನೆ ನಡೆಯಿತು. ಅದರಲ್ಲಿ ಮಹಿಳೆಯರೂ, ಮಕ್ಕಳೂ ಸೇರಿದಂತೆ ಸಾವಿರಾರು ಜನರು ಗಾಯಗೊಂಡರು; ಅನೇಕರು ಸಾವಿಗೀಡಾದರು. ಆದರೆ ಅದು ಭಾರತವನ್ನಾಳುತ್ತಿದ್ದ ಬ್ರಿಟೀಷ್ ವಸಾಹತುಷಾಹಿಗಳ ಅಧೀನದಲ್ಲಿದ್ದ ಪೋಲೀಸ್ ಅಧಿಕಾರಿಗಳ ಕಾರ್ಯಾಚರಣೆಯಿಂದ ನಡೆದ ದುರ್ಘಟನೆ. ಇದೇ 'ಜಲಿಯನ್ ವಾಲಾಬಾಗ್ ಹತ್ಯಾಕಾಂಡ'.

ಇಂತಹದ್ದೇ ಒಂದು ದುರ್ಘಟನೆ ಕಳೆದ ತಿಂಗಳು, ಅಂದರೆ 1998ರ ಜುಲೈ ತಿಂಗಳಲ್ಲಿ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿರುವ ಬಾಗೂರು-ನವಿಲೆ ಪ್ರದೇಶದಲ್ಲಿ ನಡೆದಿದೆ. ಆದರೆ ಇಲ್ಲಿ ವ್ಯತ್ಯಾಸ ವೇನೆಂದರೆ, ಜಲಿಯನ್ ವಾಲಾಬಾಗ್ ಹತ್ಯಾಕಾಂಡದಲ್ಲಿ ವಿದೇಶೀಯರ ಕೈವಾಡವಿದ್ದರೆ, ಪ್ರಸ್ತುತ ಬಾಗೂರು-ನವಿಲೆ ದುರಂತದಲ್ಲಿ 'ಮಣ್ಣಿನ ಮಗ' ಎಂದು ಹೇಳಿಕೊಳ್ಳುವ ನಾಯಕರ, ಜನಪರ ಎಂದು ಕೊಚ್ಚಿಕೊಳ್ಳುವ ಜನವಿರೋಧಿ ಜನತಾದಳ ರಾಜ್ಯ ಸರ್ಕಾರದ ಹಾಗೂ ಇತರ ರಾಜಕಾರಣಿಗಳ ಕುಮ್ಮಕ್ಕು ಇರುವುದು. ಈ ಪೋಲೀಸ್ ದೌರ್ಜನ್ಯಕ್ಕೆ ಒಳಗಾದವರಲ್ಲಿ ಹೆಚ್ಚು ಮಹಿಳೆಯರಿದ್ದದ್ದು ಮತ್ತಷ್ಟು ಶೋಚನೀಯ.

ಚನ್ನರಾಯಪಟ್ಟಣದಿಂದ ಸುಮಾರು 10ಕಿ.ಮೀ. ದೂರದಲ್ಲಿದೆ. 'ಬಾಗೂರು' ಎಂಬ ಹಳ್ಳಿ. ಇಲ್ಲಿ 19 ಜುಲೈ 1998ರಿಂದ ಪ್ರಾರಂಭವಾದ ಪೋಲೀಸ್ ದಬ್ಬಾಳಿಕೆ ಮಕ್ಕಳಿಂದ ಹಿಡಿದು, ಹೆಂಗಸರು, ಮುದುಕರು, ಪತ್ರಿಕಾ ಮಾಧ್ಯಮದವರು - ಎಲ್ಲರೂ ಬಲಿಯಾಗಿದ್ದಾರೆ. ಇದಕ್ಕೆ ಕಾರಣ ಅವರ ಬೇಡಿಕೆಗಾಗಿ ಎರಡು ವರ್ಷಗಳಿಂದ ನಡೆಸುತ್ತಿರುವ ನ್ಯಾಯಯುತವಾದ ಶಾಂತಿಯುತ ಹೋರಾಟ. ಈ ಹೋರಾಟದಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶವೆಂದರೆ, ಇದರಲ್ಲಿ ಯಾವುದೇ ತಾರತಮ್ಯವಿಲ್ಲದೆ ಮುದುಕರು, ಹೆಂಗಸರು, ಮಕ್ಕಳು, ವಿದ್ಯಾರ್ಥಿ-ಯುವಕರು ಹಾಗೂ ಗಂಡಸರು ಯಾರ ಒತ್ತಾಯವೂ ಇಲ್ಲದೆ ಸ್ವಯಂಪ್ರೇರಿತರಾಗಿ ಎ.ಐ.ಕೆ.ಎಸ್. ನೇತೃತ್ವದಲ್ಲಿ ಸಮಭಾಗಿಗಳಾಗಿರುವುದು. ಅವರು ಎರಡು ದಶಕಗಳಿಂದ ಪಡುತ್ತಿರುವ ಕಷ್ಟ ಕಾರ್ಪಣ್ಯದ ಫಲವೇ ಈ ನಿರಂತರ ಚಳುವಳಿ.

'ಹೇಮಾವತಿ ಯೋಜನೆ'ಯಡಿ ಬರುವ ಹೇಮಾವತಿ ಎಡದಂಡೆ ನಾಲೆಯ ಮೂಲಕ ಈ ನದಿಯ ನೀರನ್ನು ತುಮಕೂರಿಗೆ ಒದಗಿಸುವ ಕಾರ್ಯ ಸುಮಾರು ಇಪ್ಪತ್ತು ವರ್ಷಗಳಿಂದ ನಡೆದಿದೆ. ಈ ನಾಲೆಯ ಭಾಗವಾಗಿರುವ 12 ಕಿ.ಮಿ. ಉದ್ದದ ಸುರಂಗವು ಬಾಗೂರಿಂದ 1 ಕಿ.ಮೀ. ಇರುವ 'ಬಾಗೂರು ಕೋಡಿ' ಎಂಬಲ್ಲಿಂದ ಪ್ರಾರಂಭವಾಗಿ ಸುಮಾರು 42 ಹಳ್ಳಿಗಳನ್ನು ಹಾದು, 'ನವಿಲೆಯಲ್ಲಿ' ಕೊನೆಗೊಳ್ಳುತ್ತದೆ. ಈ ಮಧ್ಯೆ ಭೂಮಿಯಲ್ಲಿ ತೋಡಿರುವ ಸುರಂಗದ ಆಳವು 200 ರಿಂದ 250 ಅಡಿಗಳಷ್ಟು, ಅಕ್ಕಪಕ್ಕದ ಹಳ್ಳಿಗಳಲ್ಲಿ ಅಂತರ್ಜಲವು ಬಸಿದು ಹೋಗಲು ಕಾರಣವಾಗಿರುತ್ತದೆ. ಇದರ ಪರಿಣಾಮವಾಗಿ ವ್ಯವಸಾಯವನ್ನೇ ನಂಬಿ ಬದುಕುತ್ತಿರುವ ರೈತರ 3 ಲಕ್ಷ ತೆಂಗಿನಮರಗಳು ಹಾನಿಗೀಡಾಗಿರುತ್ತವೆ. ಈ ವರದಿಯನ್ನು ಸರ್ಕಾರದ ತೋಟಗಾರಿಕೆ ಇಲಾಖೆಯವರೇ ನೀಡಿರುವುದಾಗಿದೆ. ಆದರೆ ವಿಪರ್ಯಾಸವೆಂದರೆ, ಈಗ ಸರ್ಕಾರವೇ ರೈತರಿಗೆ ಇಷ್ಟು ಪರಿಹಾರ ಕೊಡಲು ಹಿಮ್ಮೆಟ್ಟಿರುವುದು! ಇಲ್ಲಿ ವಿತನೀರಾವರಿಯೂ ಸಹ ಇರುವುದಿಲ್ಲ. ಇಂತಹ ಸಂಕಷ್ಟ ಪರಿಸ್ಥಿತಿಯನ್ನು ಎದುರುಸುತ್ತಿರುವ ಅಲ್ಲಿನ ರೈತರು ಶಾಂತ ರೀತಿಯಲ್ಲಿ 'ವಡ್ಡರಹಳ್ಳಿ'ಯ ಜಾಕ್‌ವೆಲ್ ಬಳಿ 97 ದಿನಗಳಿಂದ, ಎಂ. ಗೋಪಾಲ್ ಅವರ ನಾಯಕತ್ವದಲ್ಲಿ 'ನೀರುಬಂದ್ ಚಳುವಳಿ'ಯ ಮೂಲಕ ಧರಣಿ ಹೂಡಿದ್ದರು.

97ನೇ ದಿನದಿಂದ ಪೋಲೀಸರು ತಮ್ಮ ಅಮಾನವೀಯ, ಅಸಭ್ಯ ವರ್ತನೆಯನ್ನು ಹಳ್ಳಿ ಜನರ ಮೇಲೆ ಪ್ರದರ್ಶಿಸಿದರು. ಇದಕ್ಕೆ ಬಲಿಯಾದವರಲ್ಲಿ ವಯೋವೃದ್ಧರು, ಮಕ್ಕಳು, ಹೆಂಗಸರು ಹಾಗೂ ಯುವತಿಯರೇ ಹೆಚ್ಚು. ರಾಜ್ಯ ಸರ್ಕಾರವು ಇಡೀ ಚನ್ನರಾಯಪಟ್ಟಣ ತಾಲ್ಲೂಕಿನ ಜವಾಬ್ದಾರಿಯನ್ನು ಪೋಲೀಸ್ ಅಧಿಕಾರಿಗಳಿಗೆ ವಹಿಸಿ, ಪೋಲೀಸ್ ರಾಜ್ಯವನ್ನಾಗಿ ಪರಿವರ್ತಿಸಿದೆ. ಹಾಗೆಯೇ ರಾಜ್ಯದ ವಿವಿಧ ಜಿಲ್ಲೆಗಳಿಂದ ಸಶಸ್ತ್ರ ಪೋಲೀಸ್ ಪಡೆಯನ್ನು ಕರೆತರಲಾಗಿತ್ತು. ಜುಲೈ 19ರಂದು ಜಿಲ್ಲಾಧಾರಿಗಳು ಹಾಗೂ ಎಚ್.ಡಿ. ದೇವೇಗೌಡ (ದೂರವಾಣಿ ಮುಖಾಂತರ) ಅವರ ಜೊತೆ ರೈತ ನಾಯಕರ ಮಾತುಕತೆ ವಿಫಲವಾದಾಗ, 153 ಜನರ ಬಂಧನವಾಯಿತು. ಆದರೆ ಅಂದು ಯಾವುದೇ ಹಿಂಸೆಯೂ ನಡೆಯದಂತೆ ನಾಯಕರು ಎಚ್ಚರ ವಹಿಸಿ ಜಾಕ್‌ವೆಲ್‌ನಲ್ಲಿ ನೆರೆದಿದ್ದಂತಹ ಎಲ್ಲಾ ಜನರಿಗೂ ಶಾಂತಚಿತ್ತದಿಂದ ತಮ್ಮ ಮನೆಗಳಿಗೆ ಹಿಂದಿರುಗಲು ಹೇಳಿ ಬಂಧನಕ್ಕೊಳಗಾದರು.

ಪೋಲೀಸರು ಮನೆಗಳಲ್ಲಿ ಗಂಡಸರಿಲ್ಲದ್ದನ್ನೇ ಕಾಯುತ್ತಿದ್ದು ಅವರ ಕಾರ್ಯಾಚರಣೆಯನ್ನು ಅಂತಹ ಕಡೆಗಳಲ್ಲಿ ಆರಂಭಿಸಿದರು. ಅವರು ಬಾಗೂರು, ಬಿ. ಚೌಡೇನಹಳ್ಳಿ, ದ್ಯಾವೇನಹಳ್ಳಿ, ಗೊಲ್ಲರಹೊಸಳ್ಳಿ, ವಡ್ಡರಹಳ್ಳಿ, ಬಿ. ಹೊನ್ನೇನಹಳ್ಳಿ, ಓಬಳಾಪುರ, ಕಾಮನಾಯಕನಹಳ್ಳಿ, ರಂಗಾಪುರ, ಕುರುವಂಕ ಇವೇ ಮೊದಲಾದ ಹಳ್ಳಿಗಳಲ್ಲಿ ತಮ್ಮ ಕ್ರೌರ್ಯವನ್ನು ತೋರ್ಪಡಿಸಿದರು. 19-7-98ರಂದು

ಸಂಜೆಯ ವೇಳೆಗೆ ಜಾಕ್‌ವೆಲ್ ಬಳಿ ರೈತರು ತಮ್ಮ ಬೆವರು ಸುರಿಸಿ ಕಟ್ಟಿದ್ದ 40 ಗುಡಿಸಲುಗಳಿಗೂ ಪೋಲೀಸರು ಬೆಂಕಿ ಹಚ್ಚಿದಾಗ, ಅಲ್ಲಿನ ಜನರ ಕಣ್ಣಿಂದ ನೀರು ಬರದೇ ಹೃದಯದಿಂದ ರಕ್ತ ಚಿಮ್ಮಿತು; ಅವರ ಜೀವನಕ್ಕೇ ಬೆಂಕಿ ಹಚ್ಚಿದಂತಾಯಿತು; ಅವರ ಕರುಳು ಕಿತ್ತು ಬಂದಿತು; ಅವರ ಆಕ್ರೋಶ ಹೇಳತೀರದಾಯಿತು.

ಇದನ್ನು ನೋಡಲಾರದೆ ವಡ್ಡರಹಳ್ಳಿಯ ಶಂಕರಾಚಾರಿಯೆಂಬ ಮಧ್ಯವಯಸ್ಕರು ಕುಸಿದುಬಿದ್ದರು. ನಂತರ ಬೆಂಗಳೂರಿನ 'ನಿಮ್ಹಾನ್ಸ್' ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದರು.

ಮೂರನೆಯ ದಿನ (20-7-98). ಅವರ ಶವವನ್ನು ಊರಿಗೆ ತಂದ ವಿಷಯ ತಿಳಿದ ಜನರು ಹಾಗೂ ಸರದಿ ಉಪವಾಸ ಕುಳಿತಿದ್ದ ಮಹಿಳೆಯರು ಶಂಕರಾಚಾರಿಯ ಮೃತ ದೇಹವನ್ನು ನೋಡಲು ಬಂದರು. ಆದರೆ ಕ್ರೂರವಾದ ಸರ್ಕಾರ ಪೋಲೀಸ್ ಸಹಯೋಗದೊಂದಿಗೆ, ಶಂಕರಾಚಾರಿಯವರ ಶವದಹನಕ್ಕೂ ಅಡ್ಡಿಯುಂಟುಮಾಡಿತು. ''ಬದುಕಲಂತೂ ಅವಕಾಶ ಕೊಡಲಿಲ್ಲ, ಸಾಯುವಾಗಲೂ, ಸತ್ತಮೇಲೆಯೂ ಚಿತ್ರಹಿಂಸೆಯೇ!''. ಅಂತೆಯೇ ಅವರ ಶವದೊಂದಿಗಿದ್ದ ಎಲ್ಲಾ ಮಹಿಳೆಯರಿಗೂ ಲಾಠಿ ಪ್ರಹಾರ ಪೋಲೀಸರಿಂದ. ಸಾವಿನ ದುಃಖದಿಂದ ನರಳುತ್ತಿದ್ದ ಅವರ ಮನೆಯವರು ಹಾಗೂ ಬಂಧು-ಮಿತ್ರರು ಪೋಲೀಸ್ ಏಟಿನಿಂದರೂ ನರಳಬೇಕಾದ ಪರಿಸ್ಥಿತಿ ಉಂಟಾಯಿತು.

ವಿನಾಕಾರಣವಾದ ಮಾನಸಿಕ ಹಾಗೂ ದೈಹಿಕ ಹಿಂಸೆಯಿಂದ ಪೋಲೀಸ್ ಕಾರ್ಯಾಚರಣೆ ತುಂಬಿತ್ತು. ಯಾವುದೋ ಕಿಡಿಗೇಡಿಗಳು ಬಾಗೂರಿನಲ್ಲಿ ಪೋಲೀಸರ ಪ್ರಚೋದನೆಯಿಂದಲೇ ಪೋಲೀಸ್ ಜೀಪ್ ಸುಟ್ಟ ಕಾರಣ ಯಾರೋ ಅಮಾಯಕರ ಮೇಲೆ ಬೇರೆ ಅದರ ಪರಿಣಾಮವಾಯಿತು.

ಆ ಸಮಯದಲ್ಲೇ ಅಲ್ಲಿಗೆ ಬಂದ 7 ವ್ಯಾನ್ ಹಾಗೂ 3 ಜೀಪ್‌ಗಳಿಂದ ಪೋಲೀಸರು ಇಳಿದರು. ಗೊಲ್ಲರ ಹೊಸಳ್ಳಿಯೊಳಗೆ ನುಗ್ಗಿ ಮನೆಮನೆಯನ್ನೂ ಶೋಧಿಸಲಾರಂಭಿಸಿದರು. ಇದನ್ನು ನೋಡಿದ ಅನೇಕರು ಚೆಲ್ಲಾಪಿಲ್ಲಿಯಾದರು. ಚನ್ನರಾಯಪಟ್ಟಣದ ಎ.ಐ.ಎಸ್.ಎಫ್.ನ ಅಧ್ಯಕ್ಷೆ ಕುಮಾರಿ ಸುಧಾ ಊರ ಒಳಗೆ ತಪ್ಪಿಸಿಕೊಂಡರೂ, ಅವಳು ಇದ್ದ ಮನೆಗೆ ನುಗ್ಗಿ, ಅಲ್ಲಿನ ಹೆಂಗಸರಿಗೆಲ್ಲಾ ಹೊಡೆದು, ಅವಳಿಗೂ ಮನಬಂದಂತೆ ಥಳಿಸಿ ಅವಳನ್ನು ಎಳೆದುಕೊಂಡು ಹೋಗಿ ಪೋಲೀಸ್ ವ್ಯಾನಿನಲ್ಲಿ ಹತ್ತಿಸಿಕೊಂಡರು. ಅವಳಿಗೆ ಹೊಡೆಯುವ ಸಮಯದಲ್ಲಿ, ಒಂದು ಲಾಠಿಯೂ ಮುರಿಯಿತು. ಆದರೂ ಅದನ್ನು ನಿಲ್ಲಿಸದೆಯೇ ಮುಂದುವರೆಸಿದರು. ಅವಳ ಮೈತುಂಬಾ ಹೊಡೆತದ ಗಾಯಗಳು ಇನ್ನೂ ಮಾಗಿಲ್ಲ. ಹೊಡೆಯುವುದಷ್ಟೇ ಅಲ್ಲ, ಕೆಟ್ಟಭಾಷೆಯನ್ನು ಪಯೋಗಿಸಿ ಬೈದರು.

ಸುಧಾಳನ್ನು ಎಳೆದುಕೊಂಡು ಹೋಗುವಾಗ ಗೊಲ್ಲರ ಹೊಸಳ್ಳಿಯ ಮಹಿಳೆಯರಿಗೆ ಹೊಡೆದು, ಬೈದು, ಕೂದಲು ಹಿಡಿದು ಗೋಡೆ ಬರಹಗಳನ್ನು ಅಳಿಸುವಂತೆ ಮಾಡಿ, ಬೀದಿಗಳಲ್ಲಿ ಹಾರಿಸಿದ್ದ ಕೆಂಬಾವುಟಗಳನ್ನೆಲ್ಲಾ ತೆಗೆಸಿದರು, ವಯಸ್ಸಾದ ಮಹಿಳೆಯರನ್ನೂ ಹೊರತುಪಡಿಸಿಲ್ಲ. ಒಬ್ಬ ಹೆಂಗಸಿಗೆ ಕೈ ಮುರಿದರೆ ಮತ್ತೊಬ್ಬರಿಗೆ ಕಾಲು ಮುರಿದಿದೆ. ಅಂಗಡಿಗಳಿಗೆ ನುಗ್ಗಿ ಮಾಲೀಕರಿಗೆ ಹೊಡೆದು, ಬಡಿದು, ಹೆದರಿಸಿ, ಬೆದರಿಸಿ, ಬೀಡಿ ಸಿಗರೇಟುಗಳನ್ನು ಅವರಿಂದಲೇ ತರಿಸಿಕೊಂಡು ಸೇದಿದರು. ಬೀದಿಯಲ್ಲಿ ಹೋಗುವವರಿಗೆಲ್ಲಾ ಹೊಡೆದರು. ಪೋಲೀಸರು ಹುಚ್ಚು ಹಿಡಿದಂತೆ ವರ್ತಿಸಿದ್ದಾರೆ. ಮನೆಗಳಲ್ಲಿದ್ದ ಟೆಲಿಫೋನ್, ಟಿ.ವಿ., ಟೇಪ್ ರೆಕಾರ್ಡರ್‌ಗಳನ್ನೆಲ್ಲಾ ಒಡೆದು ಪುಡಿಪುಡಿ ಮಾಡಿ, ಬಾಗಿಲುಗಳನ್ನೆಲ್ಲಾ ಒಡೆದು, ತಮ್ಮ ಕೈಗೆ ಸಿಕ್ಕವಸ್ತುಗಳನ್ನು ತೆಗೆದುಕೊಂಡು ಹೋಗಿದ್ದಾರೆ. ರೇಷ್ಮೆ ಬಟ್ಟೆಗಳನ್ನಿಟ್ಟಿದ್ದ ಪೆಟ್ಟಿಗೆಗಳನ್ನೂ ಕೂಡ ಬಿಟ್ಟಿಲ್ಲ. ಹಾಗೂ ಎಲ್ಲರಿಗೂ ಪುನಃ ಹೋರಾಟಕ್ಕೆ ಬಾರದಂತೆ ಹೆದರಿಸಿ ಬೆದರಿಕೆ ಒಡ್ಡಿದ್ದಾರೆ.

ಈ ಮಧ್ಯೆ ಪೋಲೀಸ್ ವ್ಯಾನಿನಲ್ಲಿ ಇದ್ದವರಲ್ಲಿ ಒಬ್ಬಳೆ ಹೆಣ್ಣುಮಗಳೆಂದರೆ 18 ವರ್ಷದ ಸುಧಾ. ವ್ಯಾನಿನಲ್ಲೂ ಸುಧಾಳ ಬಗ್ಗೆ ವಿಚಾರಿಸಿಕೊಳ್ಳುತ್ತಾ ವ್ಯಂಗ್ಯವಾಗಿ ಮಾತನಾಡಿದರು. ಚನ್ನರಾಯಪಟ್ಟಣಕ್ಕೆ ಕರೆದೊಯ್ಯುವಾಗ ಜಿಲ್ಲಾಧಿಕಾರಿಗಳು ಎದುರಾಗಿ ಸುಧಾಳನ್ನು ಶಂಕರಾಚಾರಿಯ ಸಾವು ಹಾಗೂ ಜೀಪ್ ಸುಟ್ಟ ಪ್ರಕರಣದ ಬಗ್ಗೆ ಕೇಳಿದರು. ಸುಧಾ ಧೈರ್ಯವಾಗಿ ಎಲ್ಲಾ ವಿಷಯಗಳನ್ನು ಹೇಳುತ್ತಿದ್ದಾಗ ಚನ್ನರಾಯಪಟ್ಟಣದ ಸಬ್‌ಇನ್ಸ್‌ಪೆಕ್ಟರ್ ''ನೋಡಿ ಸಾರ್, ಇವಳನ್ನು ಇದೇ ತರಹ ಬಿಟ್ಟರೆ, ಇವಳು ಮುಂದೆ ರಾಜಕಾರಣಿ ಆಗುತ್ತಾಳೆ, ಅದಕ್ಕೆ ಇವಳನ್ನು ಈಗಲೇ ದಮನ ಮಾಡಬೇಕು'' ಎಂದು ಹೇಳಿದರು. ಆಗ ಡಿ.ಸಿ.ಯು ಸುಧಾಳ ಜೊತೆ ಇಬ್ಬರು ಕಾನ್ಸ್‌ಟೇಬಲ್‌ಗಳನ್ನು ಬಿಟ್ಟರು. ಮಳೆ ಬರುತ್ತಿದ್ದ ಕಾರಣ ಅವರು ಸುಧಾಳಿಗೆ ಮನೆಯೊಂದರ ಒಳಗಿರಲು ಹೇಳಿ ತಾವು ಹೊರಗೆ ಕುಳಿತಿದ್ದರು. ಹಾಗೆಯೇ ಸುಧಾ ಹೊಡೆತ ತಿಂದ ನೋವಿನಲ್ಲಿಯೇ ತನ್ನ ಬುದ್ಧಿ ಉಪಯೋಗಿಸಿ ಮನೆಯವರ ಸಹಕಾರದೊಂದಿಗೆ ಕಾಲಿಗೆ ಬುದ್ಧಿ ಹೇಳಿ, ತನ್ನ ಊರಿಗೆ ನಡೆದಳು. ಅವಳ ಸಾಹಸದಿಂದ ಪೋಲೀಸರ ಕೈಗೆ ಪುನಃ ಸಿಗಲಿಲ್ಲ.

ಇನ್ನು ಆಶಾಳ ಕತೆ. 17 ವರ್ಷದ ಆಶಾ ಚನ್ನರಾಯಪಟ್ಟಣದ ಎ.ಐ.ಎಸ್.ಎಫ್.ನ ಖಜಾಂಚಿ. ಈ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿರುವ ಯುವತಿ. ಶಂಕರಾಚಾರಿಯ ಮೃತದೇಹದೊಂದಿಗಿದ್ದ ಆಶಾಳನ್ನು ಪೋಲೀಸರು ಹೊಡೆಯುತ್ತಿದ್ದಾಗ ನಾಲೆಯಲ್ಲಿ ಜಾರಿದಳು. ಆಗ ಅವರಿಬ್ಬರೇ ಅವಳನ್ನು ಮೇಲಕ್ಕೆತ್ತಿ ಪುನಃ ಹೊಡೆತ ಮುಂದುವರಿಸಿದರು. ಅವಳು ಮನೆಗೆ ಹೋಗುತ್ತಿರುವಾಗ ವಾಪಸ್ಸು ಕರೆತಂದರು. ಕರೆತಂದು ಅವಳನ್ನು